ಕೇಶವ ಮಳಗಿ

# ಕುಂಕುಮ ಭೂಮಿ

ಕಾದಂಬರಿ

ಕಲ್ಯಾಣಿ ಪ್ರಕಾಶನ
805, 8ನೇ ಮುಖ್ಯರಸ್ತೆ,
ಬನಶಂಕರಿ 1ನೇ ಹಂತ, ಶ್ರೀನಗರ
ಬೆಂಗಳೂರು-560 050

KUNKUMA BHOOMI : A Novel by
KESHAVA MALAGI

Published by : KALYANI PRAKASHANA
805, 8th Main, BSK 1st Stage, Srinagara
Bangalore-560 050.

Pages : 132+viii

---


Cover Design : P. S. Kumar
Back Page Photo : S. Ramesh

---

Price : 28-00

Printed at :
RASHMI MUDRANA
Sudhamanagar,
Bangalore-560 027

ಬಾಲ್ಯದಲ್ಲಿ ತಮ್ಮ ಅದ್ಭುತ
ಕಥಾಶಕ್ತಿಯಿಂದ ನನ್ನ ಮುಂದೆ
ಕಿನ್ನರಲೋಕ ಸೃಷ್ಟಿಸುತ್ತಿದ್ದ ನನ್ನ ತಂದೆ–

**ರಾಮಚಂದ್ರ ಮಳಗಿ**

ಇವರೊಂದಿಗೆ ಕಳೆದ ಅಂಥ ದಿನಗಳ
ಮಧುರ ನೆನಪಿಗೆ–

# ಹೀಗೆ–

ಎರಡು ವರ್ಷಗಳ ಹಿಂದೆ ಕಾಫಿ ಹೌಸಿನಲ್ಲಿ ಎಸ್. ದಿವಾಕರ್, ಕಲಾವಿದ ಪ. ಸ. ಕುಮಾರ ಕಾದಂಬರಿಯೊಂದನ್ನು ಬರೆದುಕೊಡುವಂತೆ ಪಂಥಾಹ್ವಾನ ನೀಡಿದರು. ನಾನು ಹೂಂ ಎಂದು ನಕ್ಕು ಸುಮ್ಮನಾಗಿದ್ದೆ. ಆಮೇಲೆ ಕೆಲ ದಿನ ಈ ಕಾದಂಬರಿಯ ಮುಕ್ಕಾಲು ಭಾಗ ಬರೆದು ಮುಂದಕ್ಕೆ ಬರೆಯುವುದಾಗದೆ ನಿಲ್ಲಿಸಿ ಬಿಟ್ಟೆ.

ಇದೀಗ ಗೆಳೆಯರಾದ ಚಂದ್ರಶೇಖರ ಆಲೂರು, ಚಕ್ಕೆರೆ ಶಿವಶಂಕರ್ ಅವರ ಒತ್ತಾಸೆಯ ಮೇಲೆ ಬರೆದು ಮುಗಿಸಿರುವೆ. ಅದೀಗ ಪ್ರಕಟವಾಗುತ್ತಿದೆ. ಇದರ ಲೋಪ–ದೋಷಗಳು, ಇದು ಕಾದಂಬರಿ ಹೌದೋ? ಅಲ್ಲವೋ? ಇದು ಬಹಳ ಕಾಲ ಉಳಿಯಬಲ್ಲುದೇ; ಗಟ್ಟಿಯಾದದ್ದೇ? ಇತ್ಯಾದಿಗಳ ಬಗ್ಗೆ ನಾನು ಹೆಚ್ಚಿಗೆ ತಲೆ ಕೆಡಿಸಿಕೊಂಡಿಲ್ಲ. ಇದರ ಯಶಸ್ಸು; ಏಳುಬೀಳುಗಳೆಲ್ಲ ಕನ್ನಡದಲ್ಲಿ ಕಾದಂಬರಿಗಳೇ ಬರೆವವರು ಇಲ್ಲದ್ದರಿಂದ ಕೆಟ್ಟ ಅನುವಾದಗಳು ಬರುತ್ತಿವೆ ಎಂದು ವಾದಿಸಿದ ದಿವಾಕರ್, ಕುಮಾರ್ ಹಾಗೂ ಸ್ನೇಹದಿಂದ ಪ್ರಕಟಿಸುತ್ತಿರುವ 'ಕಲ್ಯಾಣಿ ಪ್ರಕಾಶನ'ದ ಗೆಳೆಯರಿಗೆ ಸೇರಲಿ.

ಇನ್ನು ಕಾದಂಬರಿ ಬರೆವೆ ಎಂದು ಒಪ್ಪಿಕೊಂಡು ಪಣ ಸೋಲಬಾರದೆಂದರೂ ವಸ್ತುವೆಂಥದ್ದೂ ಇಲ್ಲದೆ ಬರೆಯುವುದು ಹೇಗೆಂದು ಒದ್ದಾಡುತ್ತಿದ್ದಾಗ ಕವಯಿತ್ರಿ–ಸಂಬಂಧಿ ಎಂ. ಆರ್. ಕಮಲ ಸೂಚಿಸಿದ ಒಂದೆರಡು ಘಟನೆಗಳ ಮೇಲೆ ಈ ಕಾದಂಬರಿ ಹೆಣೆದಿರುವೆ. ಎರಡು ಭಾಗಗಳನ್ನು ಓದಿ ಸಲಹೆ ನೀಡದವರು ಕಮಲ, ಸ್ವರ್ಣಲತಾ, ಶಶಿಕಲ ಚಕ್ಕೆರೆ.

ಬದುಕಿಗೆ ಅಂತಃಸತ್ವ ತುಂಬ ಬಲ್ಲ ಇವರೆಲ್ಲರ ಒಡನಾಟ ನನಗೆ ಹೃದ್ಯ.

ಕೃತಜ್ಞತೆಗಳು ಪ. ಸ. ಕುಮಾರ್, ರಶ್ಮಿ ಮುದ್ರಣದ ರಾಮಕೃಷ್ಣ ಅವರಿಗೆ ವಿಶೇಷವಾಗಿ

ಬೆಂಗಳೂರು —ಕೇಶವ

ಜೇಷ್ಠ 1990

"ಹುಟ್ಟಿದ್ದು ಬೆಳೆದು ಗಟ್ಟಿಯಾಗಲಿ ಅವರಂತೆ
ತುಂಬು ರಕ್ತದ ಹಾಡು ಕೇಳಿ ಬರಲಿ !
ಹಸಿರೆಲೆಗಳಲ್ಲಿ ಮಾಸದ ಕಣ್ಣು ಥಳಥಳಿಸಿ
ತಪ್ಪು ಹೆಜ್ಜೆಗಳನ್ನು ಸರಿಪಡಿಸಲಿ.
ನೆಲದಾಳದಲ್ಲಿ ಬೇರಿಳಿದ ಮರಗಳು ಬದುಕಿ
ಎಲ್ಲ ಕಾಲಗಳಲ್ಲೂ ಹೂವತೊಡಗಿ !"

— ಕೆ. ಎಸ್. ನರಸಿಂಹಸ್ವಾಮಿ

ಭಾಗ : ಒಂದು

# ಮೊದಲ ಕನಸಿಗೆ ಮತ್ತೆ ಹೇಳಿ ಕಳಿಸು

---

ಕಾದೆ—

ಸರಿಯೆನಿಸುತ್ತಿಲ್ಲ :

'ಕಾದದ್ದು ಸುಳ್ಳಾಯಿತು !'

ಕಾದು ಬೇಸತ್ತ ಮನಸ್ಸಿನ ಮೂಲೆಯಲ್ಲಿ ಅವಿತಿದ್ದ ನಿರೀಕ್ಷೆ ಕಂದತೊಡಗಿತು. ಅರಿಯದ ನೋವು, ವ್ಯಥೆಯಲ್ಲಿ ಬಿಟ್ಟ ನಿಟ್ಟುಸಿರು ವ್ಯರ್ಥ ಆವಿಯಾಗಿ ಹೋಗುವ ಭಯ-ಆತಂಕ. ಭರವಸೆ ಹಣ್ಣೆಲೆಯ ಹಾಗೆ ನೆಲಕ್ಕುದುರತೊಡಗಿದೆ.

ಹಿಂದೆಲ್ಲ ವರ್ಷಗಳನ್ನೆಲ್ಲ ಕೈಯ ಬೆರಳೆಣಿಕೆಯಲ್ಲಿ ಕಳೆದೆನಲ್ಲ ? ಭುಜದಲ್ಲಿ, ರೆಟ್ಟೆಯಲ್ಲಿ ಕಸುವು ತುಂಬಿ ತೊನೆಯುವಾಗ ಎಷ್ಟು ಬೆವರು ಹರಿಸಿದರೂ ದೇಹಕ್ಕೆ ಆಯಾಸವೆನಿಸುತ್ತಿರಲಿಲ್ಲ. ದುಡಿದದ್ದಕ್ಕೆ ಮನಸ್ಸು-ಮೈ ಎರಡೂ ಅರಳುತ್ತಿದ್ದವು. ಪರ್ವಕಾಲದ ಬಿಸಿಲ ಧಗೆ, ಶಖೆ ಏನೊಂದೂ ಅನಿಸುತ್ತಿರಲಿಲ್ಲ. ಋತುಮಾನಕ್ಕೆ ಮಾಗಿ, ಬಾಗಿಲು ತೆರೆದು ಕಾದು ಕೂತ ನೆಲವನ್ನು ಅಗೆದು, ಉತ್ತು, ಉತ್ತಾದ ಮೇಲೆ ಬೀಜ ಚೆಲ್ಲಿ-ಆ ಬೀಜ ಮೆಲ್ಲಗೆ ಕಣ್ಣುಬಿಟ್ಟು ಮೊಳಕೆ ಒಡೆವುದನ್ನೇ ಕಾದು, ಆ ಮೊಳಕೆಗೆ ಪಾತಿ ಕಟ್ಟಿ ನೀರು ಮೊಗೆದು ಸುರಿದಾಗ ಅದು ಸಸಿಯಾಗಿ, ಮತ್ತೂ ಬೆಳೆದು ಮೈತುಂಬ ಚಿಗುರು ಹೂ ತುಂಬಿಕೊಂಡು, ಕಾಯಾಗಿ, ಮಾಗಿ ಹಣ್ಣಾಗಿ ಮಗುವಿನ ಹಾಗೆ ಫಲ

ಕೈತುಂಬಿ, ಮನೆತುಂಬಿ; ಮನತುಂಬಿ.... ಮೈಯಲ್ಲಿ ಬಿಸಿರಕ್ತವಿದ್ದರೂ ಮನಸ್ಸು ಸಮಾಧಾನಿಯಾಗಿತ್ತು. ಸಹನೆ ನಿಧಾನಗತಿಯಲ್ಲಿ ಎಲ್ಲವನ್ನೂ ನಿರಂಬಳವಾಗಿ ಸ್ವೀಕರಿಸುವಂತೆ ಮಾಡುತ್ತಿತ್ತು. ಹಾಗೆ ನಿರಾಂತಕ ಕಾದು ಬೆಳೆಸಿದ ತೋಟ, ಮನೆ, ಮಕ್ಕಳು.... ಅನುಭವಿಸಿದ ಫಲವೇ ಅಲ್ಲವೇ ಇದೆಲ್ಲ? ಅದಕ್ಕೆ ಸುತ್ತೂರಿನ ಜನ ಈಗಲೂ ಅನ್ನುತ್ತಾರೆ :

"ನೇರವಾಗಿ ಬದುಕುದನ್ನ ಕೃಷ್ಣಸ್ವಾಮಿಯ ಬಳಿ ಕಲಿತು ಬನ್ನಿ !"

ಆದರೆ ಅದೇ ಈಗ ?

ಗೊತ್ತಿಲ್ಲ. ವಯಸ್ಸಾಗಿ, ಎಷ್ಟೆಲ್ಲ ಬದುಕು ನೋಡಿ ಮಾಗಿದವನ ಮೈಯಲ್ಲಿ ಸೈರಣೆ, ಅನುಕಂಪ, ಕ್ಷಮೆಯ ಬದಲಾಗಿ ಉದ್ವಿಗ್ನತೆ, ಹೇಳಲಾಗದ ವಿನಾಕಾರಣ ರೊಚ್ಚು, ಎಲ್ಲವನ್ನೂ ಬಿಟ್ಟು ದೂರ ಹೋಗಬೇಕೆಂಬ ವಿರಾಗಿ ಮನೋಭಾವ.

ಈಗಿನ ಈ ಭಾವನೆಗೂ- ವಯಸ್ಸಿಗೂ ಯಾವ ಸಂಬಂಧವೂ ಇರಲಿಕ್ಕಿಲ್ಲ. ಆದರೆ : ಒಂದು ಸ್ಥಿತಿಯನ್ನು ಮೀರಿದ ಮೇಲೆ ಮನಸ್ಸು ಮಧ್ಯಂತರದ ಅವಸ್ಥೆಗೆ ಬರುತ್ತದೆಂದು ಬಲ್ಲವರು ಹೇಳುತ್ತಾರಲ್ಲ. ಅಂಥ ಮಧ್ಯಮಾವಸ್ಥೆಯಲ್ಲಿ ಸಂತೋಷ-ದುಗುಡ, ದುಃಖ-ಖುಷಿ ಎಲ್ಲವನ್ನೂ ಮನಸ್ಸು ನಿರ್ಲಿಪ್ತವಾಗಿ ಸ್ವೀಕಾರ ಮಾಡಬೇಕು. ಯಾವುದನ್ನೂ ನಿರಾಕರಣೆ ಮಾಡಬಾರದು. ಎಂಥದ್ದೂ ಇಲ್ಲಿ ಅಸಾಧ್ಯವಲ್ಲ ಎಂಬುದನ್ನು ಮೊದಲು ಮನವರಿಕೆ ಮಾಡಿಕೊಳ್ಳಬೇಕು. ವಿನಾಕಾರಣ ತಳಮಳಕ್ಕೊಳಗಾಗಿ, ಆತಂಕದ ಕ್ಷಣಗಳನ್ನು ತುದಿಬೆರಳಲ್ಲಿ ಎಣಿಸುತ್ತ ಸೋತು ಸುಣ್ಣವಾಗಿ ಉದ್ರೇಕಗೊಳ್ಳುವುದನ್ನು ನಿಲ್ಲಿಸಬೇಕು— ಇದೆಲ್ಲ ಅಪರೋಕ್ಷ ಜ್ಞಾನಿಗಳಿಗೆ, ಎಲ್ಲ ತ್ಯಜಿಸಿದವರಿಗೆ ಸಾಧ್ಯವಾಗುತ್ತಿರಬೇಕು. ಬದುಕುತ್ತ ಹೋದ ಹಾಗೆ ಏನೆಲ್ಲ ಪಡೆದುಕೊಂಡರೂ ಪ್ರೀತಿಸಿದ ವಸ್ತುಗಳನ್ನು; ಪ್ರೀತಿಪಾತ್ರರನ್ನು ಕಳೆದುಕೊಂಡು ಆ ಖಾಲಿಯಾದ ಜಾಗದಲ್ಲಿ ವಿಷಾದ, ಎದೆಹಿಂಡುವ ನೋವು- ಅವರಿಲ್ಲ ಅನ್ನುವ ಅನಾಥಭಾವ ತುಂಬಿಕೊಂಡಿರುವ ತನ್ನಂಥ ಅತಿ ಸಾಮಾನ್ಯ ವ್ಯಕ್ತಿಗಳಿಗೆ ಅದು ಸಾಧ್ಯವಾಗುವುದಿಲ್ಲವೇನೋ. ಇಲ್ಲದಿದ್ದರೆ ಒಂದೆರಡು ದಿನದ ಹಿಂದೆ ಅವರು ಬರುವ ಸುದ್ದಿ ಕೇಳಿದಾಗ ಮನಸ್ಸು ಎಷ್ಟೋ ವರ್ಷಗಳ ಹಿಂದಿನ ಬದುಕಿಗೆ ಲಗ್ಗೆ ಹಾಕಿ, ನವಿಲುಗರಿಯಾಗಿ ಕುಣಿಯುತ್ತಿರಲಿಲ್ಲ. ಅವರು ಅಂದುಕೊಂಡ

ದಿನ ಬರದಾದಾಗ ತಟ್ಟನೆ ನೆಲಕ್ಕುದುರಿ ಬೀಳುವ ಒಣಗಿದ ಎಲೆಯಂತಾಗು ತ್ತಿರಲಿಲ್ಲ. ಇಂಥ ವೇಳೆಗಳಲ್ಲೇ ಇಲ್ಲದಿರುವುದಕ್ಕೇ ಮನಸ್ಸು ಮತ್ತಷ್ಟು ಹಾತೊರೆಯುತ್ತದೆ. ಇಲ್ಲದಿರುವುದನ್ನು ಕಾಣಲು ಜೀವ ಮತ್ತಷ್ಟು ಮತ್ತಷ್ಟು ಕನವರಿಸುತ್ತದೆ. ಕುಳಿತಲ್ಲಿ– ನಿಂತಲ್ಲಿ ಅವರ ಹೆಸರನ್ನು ಜಪದಂತೆ ಪಠಿಸು ತ್ತದೆ. ಆಗ ಎಲ್ಲವೂ ನಿರರ್ಥಕ ಅನಿಸಿ– ಇಷ್ಟು ವರ್ಷದ ಸಾಧನೆಯೆಲ್ಲ ಯಾಕಾದರೂ ಬೇಕಿತ್ತು ಎನ್ನುವಂತಾಗುತ್ತದೆ. ಆಗ ಎಣಿಸಲು ಗಳಿಗೆ, ದಿನ, ಋತುಮಾನದ ಪ್ರಭವ, ವಿಭವಗಳು, ಕಣ್ಣಿನಾಚೆಯ ಕ್ಷಿತಿಜದವರೆಗೂ ಹಬ್ಬಿ ನಿಂತಿರುವ ನಕ್ಷತ್ರಗಳು; ನಾವವಕ್ಕೆ ಕೊಟ್ಟ ಅಶ್ವಿನಿ, ಭರಣಿ, ರೋಹಿಣಿ, ಮೃಗಶಿರಾ.... ಹೆಸರು ಎಲ್ಲ ಮುಗಿದು ಹೋಗುತ್ತವೆ. ಹೆಸರು ಮುಗಿದು ಹೋದರೂ ನಕ್ಷತ್ರಗಳು ಮಾತ್ರ ಉಳಿದುಬಿಡುತ್ತವೆ: ಉಳಿದ ಅವುಗಳ ಬೆಳಕನ್ನು ದಿಟ್ಟಿಸಲು ಈಗಿನ ಕಂಬೆಳಕು ಸಾಲದೆ ಮಂದವಾಗಿ ಬಿಡುತ್ತವೆ. ನಮ್ಮ ಕಣ್ಣಿಗೆ ಬಿಟ್ಟಿರುವ ಹೂವನ್ನು ; ಪೊರೆಯನ್ನು ಹಾಗೇ ಉಳಿಸಿ ಈ ನಕ್ಷತ್ರ ಖಚಿತ ರಾತ್ರಿ, ಅದರಾಚೆಯ ಬೆಳದಿಂಗಳು ಮಾತ್ರ ಹಾಗೇ ಉಳಿದು ಬಿಡುತ್ತದೆ: ಕಾಲಾತೀತ ಪ್ರಭೆಯನ್ನು ತುಂಬಿಕೊಂಡು– ಬಹುಶಃ ಪ್ರಳಯದ ದಿನವೂ ಕೂಡ! ಈಗ ಬರಲಿಲ್ಲವಲ್ಲ ಅವರಂತೆ! ಆಗ ನಮ್ಮ ಕಣ್ಣಿನ ಮಿತಿ ತಿಳಿದು ಮನಸ್ಸಿಗೆಲ್ಲ ಕಸಿವಿಸಿ. ಎದೆಯಾಳದಲ್ಲಿ ಚಳಿಗಾಲದ ಕತ್ತಲೆಯಲ್ಲಿ ಗಿಡಗಂಟಿಗಳ ಎಲೆಗಳಿಂದ ಹನಿಯುವ ಕೊನೆಯ ಇಬ್ಬನಿ ಹನಿಯ ಹಾಗೆ– ಕರಗದ ಯಾವುದೋ ಘಣ್ಣನೆಯ ಮುದ್ದೆಯೊಂದು ಕೂತಹಾಗೆ. ಕಳವಳದ ಮನ ಚಳಿಗೆ ಕೊರೆಯುವ ಒದ್ದೆ ನೆಲಕ್ಕೆ ಬಿಸಿ ಅಂಗಾಲನಿಟ್ಟಾಗ ಬೆಚ್ಚುವಂತೆ ಬೆಚ್ಚುತ್ತೆ.

ಕುಳಿತಲ್ಲಿ–ನಿಂತಲ್ಲಿ, ಜಗುಲಿಗಾತು ಮಲಗಿದಲ್ಲಿ, ಗದ್ದೆಬದುವಲ್ಲಿ ಹೆಜ್ಜೆ ಇಡುವಲ್ಲಿ ಕಣಸಲ್ಲಿ, ಅರೆ ಎಚ್ಚರದಲ್ಲಿ ಏನೇನೋ ಕಾಡುತ್ತದೆ. ಆಶ್ಚರ್ಯ ವೆಂದರೆ ಇಂಥ ಸಮಯದಲ್ಲೂ, ವೇದನೆಯಲ್ಲೂ ಮನಸ್ಸು ಒಂಥರದ ಖುಷಿ ಗೊಳಗಾಗುತ್ತದೆ. ನಗು ತರಿಸುತ್ತದೆ, ಚಿಗರೆಮರಿಯಾಗುತ್ತದೆ. ಈಗ ಸಿಗದ, ಹಿಂದೆ ಅನುಭವಿಸಿದ, ಈಗ ಕನಸಾದ, ಹಿಂದೆ ನಡೆದ ಈಗ ಇಲ್ಲದ, ಹಿಂದೆ ಇದ್ದ ಬಾಲ್ಯದ ನೆನಪು ಬರುತ್ತದೆ. ಮತ್ತೆ ಮುಖದ ಮೇಲೆ ನಗು ತುಂಬುತ್ತದೆ. ಆದರೆ ಮನಸ್ಸು ತುಂಬಿಕೊಂಡು, ನಿಷ್ಕಲ್ಮಷವಾಗಿ ನಕ್ಕು

ಬಿಡದ ನಗು ಯಾತರ ನಗು ? ನೊಂದ ಮನಸ್ಸಿನ ನೋವನ್ನು ಅದುಮಿಟ್ಟು ತೋರಿಕೆಗೆ ನಗುವ ನಗು ಎಂಥ ನಗು ? ಬಾಲ್ಯದಲ್ಲಿ ಸುಮ್ಮನೆ, ಸುಖಾ ಸುಮ್ಮನೆ, ಬಾಯಿಗೆ ಅಂಗೈಯಿಟ್ಟು, ಎಡಗೈಯಿಂದ ಹೊಟ್ಟೆ ಹಿಡಿದುಕೊಂಡು ನಗುತ್ತಿದ್ದೆವಲ್ಲ ?

ಆಷಾಡ ಮಾಸದ ಬೆದೆಯೆದ್ದ ನಾಯಿಹಿಂಡನ್ನು ನೋಡಿದರೂ ನಗು. ಅಮ್ಮ ಬಿಸಿನೀರನ್ನು ಬೆನ್ನಿಗೆ ಬೋಸಿ ಬೋಸಿ ಸುರಿವಾಗ ಕಚಗುಳಿಯಾಗಿ ನಗು. ಊರಗುಡ್ಡದ ಗುಡಿಗೆ ಪೂಜೆಗೆ ಹೋದಾಗ ಕೈಯಲ್ಲಿನ ಹಣ್ಣು ಮಂಗಗಳು ಕಿತ್ತು ತಗೊಂಡರೆ; ಸಾಲೇಲಿ ಪಾಠ ಒಪ್ಪಿಸದೆ ಐಗಳು ದಡ್ಡ ಹುಡುಗರಿಗೆ ಜಕ್ಕಸ್ತು ಉಟಾಬೈಸು ಮಾಡಿಸುವಾಗ ನಗು. ಕರುವಿನ ಕೊರಳಿಗೆ ಕಟ್ಟಿದ ಗಂಟೆದಾರದ ಸುತ್ತ ಕೈಯಾಡಿಸಿದಾಗ, ಅದಕ್ಕೆ ಉಪ್ಪುಪ್ಪು ಮಾಡುವಾಗ ಅದರ ಹೊಟ್ಟೆಯ ಭಾಗ ಜುಮ್ಮೆಂದು ಅದು ಮೈಕುಲುಕಿದಾಗ– ಅದರ ಮೇಲೆ ಕೂತ ನೊಣ–ನೊರಜು ಎದ್ದೋಡುವಾಗ ನಗು– ಸುಖಾ ಸುಮ್ಮನೆ.

ಆ ನಗು ಈಗೆಲ್ಲಿ ಹೋಯಿತು ? ಯಾರ ಮುಖದಲ್ಲಿ ಕಾಣಬೇಕೆಂದು ಬಯಸಿದ್ದೆನೋ ಅವರ್ಯಾಕೆ ತಮ್ಮ ನಗು ಮುಖ ತೋರುತ್ತಿಲ್ಲ ?

# ಅಮ್ಮನ ಕರಿಬೇವು ಸಾರು : ನನ್ನ ಬಾಲ್ಯ

ಇದ್ದಿರಬೇಕು : ಎಷ್ಟು ? ಅರವತ್ತು ವರ್ಷಗಳ ಹಿಂದೆಯಾ ?

ನನ್ನ ವಯಸ್ಸು ಎಷ್ಟೋ ಆಗ ನೆನಪಿಲ್ಲ.

ಪೂರ್ವಕಾಲದ ಜನ ನಾನು ಹುಟ್ಟಿದ ದಿನ ಬರೆದಿರುವುದು ಮರೆತು ಬಿಟ್ಟಿದ್ದರು. ಹುಟ್ಟಿದ್ದು ಕೂಡ ಅಮ್ಮನ ತವರುಮನೆಯಲ್ಲಿ. ಕಾಡಿನ ನಡುವೆ ಅಜ್ಜನದು ಒಂಟಿ ಬ್ರಾಹ್ಮಣನ ಮನೆ. ಹುಟ್ಟಿದಾಗ ಅಪ್ಪಯ್ಯಂಗೆ ಸುದ್ದಿ ಮುಟ್ಟಿಸಿದರು. ಅಪ್ಪ, ಆ ಸುದ್ದಿ ಹಳ್ಳಿಗೆ ಬಂದಾಗ ಶಾನುಭೋಗಿಕೆಗಾಗಿ ಯಾವುದೋ ಊರಿಗೆ ಹೋಗಿದ್ದ. ತಿರುಗಿ ಬಂದಾದಮೇಲೆ ಮಾವನ ಮನೆಗೆ ಬಂದ. ಆಗಲೇ ನಾ ಹುಟ್ಟಿ ಹದಿನೈದು ದಿನವೋ, ತಿಂಗಳೋ ಕಳೆದಿತ್ತು. ದೇಶಾವರಕ್ಕೆ ಹೋಗಿದ್ದ ಅಜ್ಜನೂ ಬಂದ. ಅಡುಗೆ ಮನೆಯಲ್ಲಿದ್ದ ಮುದುಕಿಗೆ, ಬಾಣಂತಿ ಕೋಣೆಯಲ್ಲಿದ್ದ ಅಮ್ಮಂಗೆ ಕಾಲುಕೂಡ ತೊಳೆಯದೆ ನಡುಮನೆಯಲ್ಲೇ ನಿಂತು ಬೈದ. ಪಕ್ಕದಹಳ್ಳಿಯ ಜೋಯಿಸರಿಗೆ, ಅವರ ಹೆಂಡತಿಗೆ, ಕೂಸಿನ ಸೋದರಮಾವನಿಗೆ ಹೇಳಿಕಳಿಸಲು ಏನು ಧಾಡಿಯಾಗಿತ್ತು ಅಂತ. ಅಜ್ಜ, ಕಪ್ಪು ಬ್ರಾಹ್ಮಣ. ದೇಶಾವರದಿಂದ ಬಂದಾಗಲೇ ಮಟಮಟ ಮಧ್ಯಾನ್ಹವಾಗಿತ್ತು. ಆತ ಮಗುವಿನ ಹುಟ್ಟಿದ ನಕ್ಷತ್ರ, ತಿಥಿ ಬರೆದಿಡದಿದ್ದುದಕ್ಕಾಗಿ ಹಸಿದ ಹೊಟ್ಟೆಯಲ್ಲಿ ನಡಗುತ್ತ ಅಡುಗೆಮನೆಯಲ್ಲಿದ್ದ ಮುದುಕಿಗೆ ಮಂತ್ರಪುಷ್ಪವೇರಿಸತೊಡಗಿದಾಗ ಮುದುಕಿ ಅಲ್ಲಿಂದಲೇ ಮುಳುಮುಳು ಅಳುವ ಸದ್ದು ಕೇಳಿಸಿ ಅಪ್ಪಯ್ಯ — "ಮಾವಯ್ಯ ಮೊದಲು ಆಹ್ನಿಕ

ಮುಗಿಸಿ, ಸಾಲಿಗ್ರಾಮದ ತಲೆಗೊಂದಿಷ್ಟು ನೀರುಹಾಕಿ, ತೀರ್ಥಕೊಟ್ಟು ಊಟಕಾಣಿಸಿ. ಆಮೇಲೆ ಮಾತಾಡಿದರಾಯ್ತು" ಎಂದು ರಟ್ಟೆ ಹಿಡಿದು ಬಚ್ಚಲು ಮನೆಗೆ ಕರೆದೊಯ್ದರು. "ಮಗು ಹುಟ್ಟಿದ್ದೊಂದು ದಿನ, ಅದಕ್ಯಾಕೆ ತಲೆಕೆಡಿಸಿ ಕೊಳ್ಳಬೇಕು ?" – ಎಂದು ಸಮಾಧಾನ ಮಾಡಿದರು. ಒಂದುದಿನ ಗುರುತು ಹಾಕಿ ನವಗ್ರಹಶಾಂತಿ ಹೋಮ ಮಾಡಿದರು. ಕೆಟ್ಟನಕ್ಷತ್ರವಿದ್ದರೆ ಪೀಡೆ ತೊಲಗಲಿ ಅಂತ ಗೋದಾನ ಮಾಡಿದರು. ಆದರೂ ಮುದುಕಿ ಬದುಕಿರುವ ವರೆಗೆ ಅಜ್ಜ ನಡುಮನೆಯಿಂದ-ಅಡುಗೆಮನೆಗೆ ತನ್ನ ಬೈಗುಳ ವರ್ಗಾಯಿಸು ವುದು, ಅಜ್ಜಿ ಅಲ್ಲಿಂದಲೇ ಕೈಬಾಯಿಮಾಡುತ್ತ ಕಣ್ಣಲ್ಲಿ ನೀರು ಸುರಿಸುವುದು ನಡೆದೇ ಇತ್ತಂತೆ. ಸಿಟ್ಟಿನ ಕಪ್ಪು ಬ್ರಾಹ್ಮಣ ಅಜ್ಜ ; ಮುಸುಮುಸು ಅಳುವ ಮುತ್ತೈದಿ ಅಜ್ಜಿ !

ನಾನು ಒಮ್ಮೊಮ್ಮೆ ಏನು ಮಾಡುತ್ತಿದ್ದೆನೆಂದರೆ— ಅಮ್ಮ ಮುಂಜಾನೆ ಮಡಿಸ್ನಾನ ಮಾಡಿ ಅಡುಗೆಮನೆಗೆ ಹೋಗುತ್ತಿದ್ದಳಲ್ಲ, ಆಗ : ಮೆಲ್ಲಗೆ ಸದ್ದಾಗದ ಹಾಗೆ ಹಿಂದಿನಿಂದ ಆಕೆಯ ಬೆನ್ನಮೇಲೆ ಬೀಳುತ್ತಿದ್ದೆ. ಕೈಗಳನ್ನು ಕೊರಳಿಗಿಳಿ ಬಿಡುತ್ತಿದ್ದೆ – ನಾನು ಬಂದ ಬಾಗಿಲ ಸದ್ದೂ ಆಕೆಗೆ ಕೇಳಿಸದು.

ಅಡುಗೆ ಮನೆ ತುಂಬ ಕಟ್ಟಿಗೆ ಒಲೆಯಿಂದ ಹೊಗೆ. ಜಾಲಿಮುಳ್ಳಿನ ಕಟ್ಟಿಗೆ. ಒಲೆಯಲ್ಲಿ ಧಗಧಗ ಉರಿ. ಕಟ್ಟಿಗೆ ತುದಿಗೆ ಒಂದುಥರದ ಅಂಟು ಬುರುಗು. ಒಲೆಯಮೇಲೆ ಕಾವಲಿ, ಹೆಂಚು. ಅಮ್ಮನ ಕಣ್ಣಲ್ಲಿ, ಮೂಗಲ್ಲಿ ದಳದಳ ನೀರು. ಆಕೆ ಸೆರಗಿನಿಂದ ಮೂಗೊರಿಸಿಕೊಳ್ಳುತ್ತ, ಮುಟಿಗೆಯಿಂದ ಹಣೆಮೇಲೆ ಬಿದ್ದ ಕೂದಲು ಸರಿಸಿಕೊಳ್ಳುತ್ತ, ರೊಟ್ಟಿ ತಟ್ಟುತ್ತಾಳೆ. ಒಮ್ಮೆ ಪಕ್ಕದ ಒಲೆಯಮೇಲಿನ ಕೊಳದಪ್ಪಲೆಯಲ್ಲಿ ಕೊತಕೊತ ಕುದಿವ ಹುಳಿಯನ್ನು ಸೌಟುಹಾಕಿ ತೊಳೆಸುತ್ತಾಳೆ. ಮತ್ತೆ ರೊಟ್ಟಿ ತಟ್ಟುವ ನಡುನಡುವೆ ಬೆನ್ನು ಬಾಗಿಸಿ ಊದುಗೊಳುವೆಯಿಂದ ಉಫ಼್ಫ಼್, ಉಫ಼್ಫ಼್ ಅಂತ ಊದಿ ಉರಿ ಸರಿ ಮಾಡುತ್ತಾಳೆ. ಹಾಗಾಕೆ ಬೆನ್ನುಬಾಗಿಸಿದಾಗ ನಾನು ಬೆನ್ನಿಗೆ ಜೋತು ಬಿದ್ದು, ತೂಗುತ್ತ— ಆಕೆಯ ಕಿವಿಯ ಬೆಂಡೋಲೆ ತಿರುವುತ್ತ—

'ಅಮ್ಮಾ, ಅಮ್ಮಾ, ಮತ್ತೆ ನಾ ಹುಟ್ಟಿದ್ದು ಯಾವಾಗ ಕಣೇ. ಮಾಧವಾ ಹೇಳ್ತಾನೆ ನನ್ನ ಅಕ್ಕಿಸುಚ್ಚು ಕೊಟ್ಟು ಗೊರವಯ್ಯನ ಹತ್ರ ಸಾಲಾ ತಗೊಂಡಿದಿರಂತೆ, ಹೌದೇನೇ ?' — ಅಂತೆಂದರೆ,

'ಅಯ್ಯೋ, ಅಪ್ಪಯ್ಯಾ ಮೊದಲು ಬೆನ್ನಿಂದ ಇಳಿಯೋ ಮರೀ, ಹುಳಿ ತೊಳಸುತೀನಿ, ಮೈಮೇಲೆ ಚೆಲ್ಲೀತು' – ಅಂದು ಕೊರಳಿಗ್ಹಾಕಿರುವ ಕೈ ತೆಗೆದು ಕೆಳಗಿಳಿಸಿ ನೀರು ತುಂಬಿದ ಕಣ್ಣಿಂದ ನನ್ನತ್ತ ನೋಡುತ್ತಿದ್ದಳು. ನಾನು ಮುಖ ಊದಿಸಿ ಕೈ ಹೊಸೆಯುತ್ತ ನಿಂತಿದ್ದು ನೋಡಿ :

'ಆ ಮಾಧ್ವರ ಮಾಧವನಿಗೆ ಬುದ್ಧಿ ಇಲ್ಲಾ. ಈ ಪುಟಾಣೀನ್ನ ಯಾರಾದ್ರೂ ಗೊರವಯ್ಯನ ಹತ್ರ ಅಕ್ಕಿಕೊಟ್ಟು ಕೊಂಡಾರಾ ? ಇದು ಈ ಹೊಟ್ಟೇಲಿತ್ತು ಚೂಲಿ. ಇಲ್ಲಿಂದ ಬಂತು....' ಎಂದು ತನ್ನ ಹೊಟ್ಟೆಮೇಲೆ ಕೈಯಾಡಿಸಿ ತೋರಿಸುತ್ತಿದ್ದಳು. ನಾನು ಆಕೆಯ ಚೂಪುಮೂಗನ್ನೇ ನೋಡುತ್ತ ನಿಲ್ಲುತ್ತಿದ್ದೆ. ಆಗ ಮತ್ತೂ ಹತ್ತಿರ ಕರೆದು ತಬ್ಬಿ ಮುದ್ದುಮಾಡಿ 'ನೀ ಹುಟ್ಟಿದ್ದು ಕಾರ್ತಿಕ ಹುಣ್ಣಿಮೆಯಾದ್ಮೇಲೆ ವಾದಿರಾಜರ ಪುಣ್ಯತಿಥಿ ಬರುತ್ತಲ್ಲ, ಆಗ. ಅಪ್ಪಯ್ಯ ಆಗೆಲ್ಲಿ ಊರಲ್ಲಿದ್ರು ? ಹುಟ್ಟಿ ಎಷ್ಟೋ ದಿನದ ಮೇಲೆ ಬಂದ್ರೂನ್ನೂ. ನೀನ್ಯಾಕೆ ಬೀದಿಹುಡುಗಾ ಕೆಟ್ಟೋದ್ಯೋ ?'

'ಭಾರದ್ವಾಜ ಗೋತ್ರದೋನು ನೀನು : ತಿಮ್ಮಪ್ಪಣ್ಣ ಭಟ್ಟರ ತಳಿ, ಗೊತ್ತಾತು ?' — ಅಂತ ನಾ ಹುಟ್ಟಿದಾಗ ನಡೆದ ರಾದ್ಧಾಂತ ಹೇಳುತ್ತಿದ್ದಳು. ಕಾರ್ತಿಕ ಹುಣ್ಣಿಮೆಯ ನಂತರ ಮಳಖೇಡದಲ್ಲಿ ನಡೆಯುವ ವಾದಿರಾಜ ತೀರ್ಥರ ಆರಾಧನೆಯಂದು ಕಡಲೇಬೇಳೆ, ಬೆಲ್ಲ, ಹೆರೆದ ಒಣಕೊಬ್ಬರಿಯನ್ನು ಹಾಕಿ ಹಯಗ್ರೀವ ಮಾಡಿ ನನ್ನ ಹುಟ್ಟುಹಬ್ಬ ಮಾಡುತ್ತಿದ್ದಳು.

ನನಗೆ ಆಕೆ ಹೇಳಿದ್ದು ಅರ್ಥವಾಗದಿದ್ದರೂ ನಗುತ್ತ ಆಕೆಯನ್ನು ಗಟ್ಟಿಯಾಗಿ ತಬ್ಬುತ್ತಿದ್ದೆ. ಅಮ್ಮ ಆಗ ಇನ್ನೂ ಖುಷಿಯಾಗಿ ಮಣೆಯಿಂದ ಎದ್ದು ಸೆಲ್ಫಿನಲ್ಲಿರುತ್ತಿದ್ದ ಕೊಬ್ಬರಿ ತುಣುಕು–ಪುಟಾಣಿ ಬೆಲ್ಲ ಕಿಸೆಗೆ ತುಂಬುತ್ತಿದ್ದಳು. ನಾನು ಪುಟಾಣಿ ಅಷ್ಟೂ ತಿಂದರೆ ಮುಗಿದುಹೋಗಿಬಿಡುತ್ತದೆಂದು ಒಂದೊಂದೇ ಕಾಳನ್ನು ಬಾಯಿಗೆ ಹಾಕಿಕೊಳ್ಳುತ್ತ ತುದಿಗುಂಡಿಯಲಿ ಮೂಲೆಗೆ ಕೂಡುತ್ತಿದ್ದೆ. 'ಇಲ್ಯಾಕೆ ಮಡಿಹೆಂಗಸಂಗೆ ಹೊಗೆಯಲ್ಲಿ ಕೂಡ್ತೀಯೋ ಆಡುಕ್ಕೆ ಹೋಗು' – ಅಂತ ಅಮ್ಮ ಅಂದರೆ ನಗುತ್ತ ಒಲ್ಲೆ ಅಂತ ಗೋಣು ಹಾಕುತ್ತಿದ್ದೆ.

ಅಡುಗೆ ಮನೆತುಂಬ ಹೊಗೆ– ಹೊಗೆ ವಾಸನೆ. ರೊಟ್ಟಿ ತಟ್ಟುವ ಅಮ್ಮ. ಆಕೆ ತಟ್ಟಿದ ರೊಟ್ಟಿ ಹೆಂಚಿನ ಮೇಲೆ ಹಾಕಿದರೆ ಅದು ಬುರುಬುರುನೆ ಉಬ್ಬ

ತೊಡಗುತ್ತದೆ. ಆಗಾಕೆ ಅದರ ಮೇಲ್ಭಾಗಕ್ಕೆ ಎಣ್ಣೆಬಿಟ್ಟು ಅದನ್ನು ತಿರುವಿ ಹಾಕುತ್ತಾಳೆ. ಆಮೇಲೆ ಕಾವಲಿಯಿಂದ ತೆಗೆದು ಒಲೆಯ ಪಕ್ಕದ ಕೆಂಡದ ಮೇಲೆ ಹಾಕಿ ಪರಾತದಲ್ಲಿ ಜೋಡಿಸುತ್ತಾಳೆ. ಕುದಿವ ಹುಳಿಗೆ, ಕರಿಬೇವಿನ ಸಾರಿಗೆ ಸೌಟುಹಾಕಿ ತೊಳೆಸುತ್ತಾಳೆ. ಅಮ್ಮ ಮಾಡುವ ಕರಿಬೇವು-ಕೊತ್ತಂಬರಿ, ಮೆಣಸಿನ ಸಾರಿಗೆ ಗಮ್ಮಂತ ವಾಸನೆ. ಹವೀಜ, ಅಚ್ಚ ಕಾರದಪುಡಿ, ಮೆಂತ್ಯ ಕುಟ್ಟಿ- ಆಕೆ ಇಂಗಿನ ಒಗ್ಗರಣೆ ಕೊಡುವಾಗ ಆ ವಾಸನೆ ಇನ್ನೂ ಹೆಚ್ಚುತ್ತದೆ. ಅಡುಗೆ ಮನೆ-ಪಡಸಾಲೆ ಜಗುಲಿಗೂ ಹಬ್ಬುತ್ತದೆ. ಅಪ್ಪಯ್ಯ ಪಡಸಾಲೆಯಲ್ಲಿ ಲೆಕ್ಕ ಬರೆಯುತ್ತ ಕೂತವರು- 'ಗೋದಾವರಿ, ಅಡುಗೆ ಆಯ್ತೇನೆ ? ಏನೇ ಹೇಳು, ನಿನ್ನ ಕರಿಬೇವು-ಇಂಗಿನ ಸಾರು ಈ ಕಡೆ ಬಯಲು ಸೀಮೆ-ಆ ಕಡೆ ಮಲೆನಾಡವರ್ಗು ವಾಸ್ನೆ ಚೆಲ್ಲುತ್ತೆ ನೋಡು' - ಅಂದಾಗ ಅಮ್ಮ ಸೆರಗಿನ ಮರೆಯಲ್ಲಿ ನಗುವುದನ್ನು ಮೂಲೆಯಲ್ಲಿ ಕೂತ ನಾನು ನೋಡುತ್ತೇನೆ. ಸಾರಿಗೆ ಒಗ್ಗರಣೆ ಕೊಟ್ಟಾದಮೇಲೆ - 'ನಿನ್ನ ಅಪ್ಪಯ್ಯನ್ನ ಊಟಕ್ಕೆ ಕರಿಯೋ' - ಅಂದಾಗ 'ಮೊದಲು ನನಗೆ ರೊಟ್ಟಿ' - ನಾನಂದರೆ ಅಮ್ಮ ರೊಟ್ಟಿಗೆ ತುಪ್ಪ-ಉಪ್ಪು ತೊಡೆದು ಸುರುಳಿ ಮುಟಿಗೆ ಮಾಡಿ ಕೈಗಿಟ್ಟಾಗ ತಲೆಮೇಲೆ ಬೌಡಿಯ ಬುಟ್ಟಿಯನ್ನು ಹೊತ್ತ ದುರುಗ-ಮುರುಗನ ಶೈಲಿಯಲ್ಲಿ ನಾನು ಪಡಶಾಲೆಗೆ ಹೋಗುತ್ತಿದ್ದೆ.

ವಾದಿರಾಜರ ಪುಣ್ಯತಿಥಿಯಂದು ನನ್ನ ಹುಟ್ಟುಹಬ್ಬವೇನೋ ಮಾಡುತ್ತಿದ್ದರೂ- ಅಮ್ಮನ ಇಂಗಿನ ಸಾರಿನ ವಾಸನೆಯ ಗುಟ್ಟಿನಂತೆ ನಾನು ಹುಟ್ಟಿದ ದಿನದ ಗುಟ್ಟು ಈವರೆಗೂ ತಿಳಿಯಲೇ ಇಲ್ಲ. ಇರಲಿ. ಅವೆರಡರ ಗುಟ್ಟು ಗೊತ್ತಾಗುವುದು ಬೇಡ. ಅವು ಹಾಗಿದ್ದರೇನೆ ಚೆನ್ನ.

# ಒಂದು ನೂಗಿಯ ಬೆಡಗಿನ ಬೆಳಗು

ಅದಾಯಿತಲ್ಲ.

ಅಪ್ಪಯ್ಯ ನಮ್ಮ ಹೋಬಳಿಯ ಸುತ್ತ ಹತ್ತೂರಿಗೂ ಶಾನುಭೋಗರು. ಅದು ವಂಶಪಾರಂಪರ್ಯವಾಗಿ ಬಂದದ್ದು. ಅವರ ಕೆಲಸಗಳೆಲ್ಲ ತುಂಬ ಅಚ್ಚು ಕಟ್ಟು; ಜನರಿಗೆ ಅವರೆಂದರೆ ಅಚ್ಚುಮೆಚ್ಚು. ಅಮ್ಮನ ಇಂಗಿನೊಗ್ಗರಣೆಯ ಸಾರಿಗಾಗಿ ಅಕ್ಕಪಕ್ಕದ ಮನೆಯವರು ಬೋಗುಣಿ, ಪಂಚಪಾತ್ರೆ ಹಿಡಿದು ಬರುತ್ತಿದ್ದ ಹಾಗೆ, ಸುತ್ತೂರಿನ ಜನ ಅಪ್ಪಯ್ಯನನ್ನು ಹುಡುಕಿಕೊಂಡು ಬರುತ್ತಿದ್ದರು. ಎಂಥ ಕೆಲಸವಾದರೂ, ಯಾವ ನ್ಯಾಯ, ಜಗಳ, ರಂಟೆಗಳಾದರೂ ಅಪ್ಪಯ್ಯ ಕೈಯಲ್ಲಿ ತುಳಸಿದಳ ಕೊಟ್ಟ ಹಾಗೆ ; ಎಲ್ಲರಿಗೂ ಒಪ್ಪವಾಗುವ ಹಾಗೆ ಮುಗಿಸಿಕೊಡುವವರು. ಮುಗಿಸಿದ ಕಾರ್ಯಕ್ಕೆ ಪ್ರತಿರೂಪವಾಗಿ ಎಂದೂ ಏನನ್ನೂ ಬಯಸದವರು. ಆದರೂ ಒಕ್ಕಲಿನ ಜನ ನಮ್ಮ ಮನೆಯನ್ನು ಯಾವಾಗಲೂ ದವಸಗಳಿಂದ ತುಂಬುತ್ತಿದ್ದರು.

ನನಗೆ ಆಗಿನ್ನೂ ತುಟಿಯ ಮೇಲೆ ಕಪ್ಪನೆಯ ಮೀಸೆ ಚಿಗುರೊಡೆವ ಕಾಲ. ಕಾಣುವ ಪ್ರತಿಯೊಂದರಲ್ಲೂ ಬೆಡಗು, ಮಿಂಚಿನಂತಹ ಹೊಳಪು. ಮೈಯಲ್ಲಿ ಬಿಸಿರಕ್ತ. ಎಲ್ಲವೂ ಹೊಸ ಅನುಭವಗಳೇ. ಮೇಲಾಗಿ ಏನನ್ನಾದರೂ ಸಾಧಿಸಬೇಕು ಅನ್ನುವ ಆತುರ. ಅಪ್ಪಯ್ಯ ನನ್ನನ್ನು ಗಮನಿಸುತ್ತಿದ್ದರು. ನನಗರಿವಾಗದಂತೆ ನನ್ನನ್ನು ಹುರಿಗೊಳಿಸುತ್ತಿದ್ದರು. ಎಷ್ಟೆಂದರೂ ಶ್ರೀಕಂಠಐಗಳ ಮಠದಲ್ಲಿ ಪಾಟಿಯ ಮೇಲೆ ಮಗ್ಗಿ ಲೆಕ್ಕ ತಿದ್ದಿದವರಲ್ಲವೆ ಅವರು ?

ಅಂತಹ ವರ್ಸಾಗಿಕಾಲದ ಒಂದು ಚುಮುಗತ್ತಲಿನ ನಸುಕು. ಅಪ್ಪಯ್ಯ ಎದ್ದು ನನ್ನನ್ನು ಎಬ್ಬಿಸಿದರು. ಸ್ನಾನ ಮಾಡಿ, ಹಣೆಗೆ ಸಾದಿನ ಬೊಟ್ಟಿಟ್ಟು ಕೊಂಡು ಬಿಳಿಬಿಳಿ ಪಂಚೆಯುಟ್ಟು, ಅದರ ಮೇಲೆ ನೆಹರು ಶರ್ಟ್ ತೊಟ್ಟು, ಅದರ ಮೇಲೊಂದು ಕಪ್ಪುಕೋಟು, ಅದರ ಮೇಲೊಂದು ಶಲ್ಯ ಹೊದ್ದು ಕೈಯಲ್ಲಿ ಕೊಡೆ ಹಿಡಿದು, ಚಪ್ಪಲಿಮೆಟ್ಟಿ ಜಗುಲಿ ದಾಟಿದರು ; ಅವರ ಹಿಂದೆ ನಾನು. ಅವರು ಕಾಡು ದಾರಿಯಲ್ಲಿ ಬೀಸುಬೀಸಾಗಿ ಹೆಜ್ಜೆ ಹಾಕುತ್ತಿದ್ದರೆ ಅವರ ಬೆನ್ನ ಹಿಂದೆ ನಾಕು ಹೆಜ್ಜೆ ದೂರದಲ್ಲಿ ನಾನು ಹೆಗಲ ಚೀಲದಲ್ಲಿ ಜಮೀನು ಅಳೆಯುವ ಸರಪಳಿ, ಪಾಣಿಪುಸ್ತಕ, ಮಸಿದೌತಿ, ಲೆಕ್ಕಣಿಕೆ ಹಿಡಿದು ನಡೆಯುತ್ತಿದ್ದೆ.

ಆವತ್ತು ಹೊರಟಿದ್ದು ಹರದಾರಿದೂರದ ಸಂಪಿಗೆ ಹಳ್ಳಿಗೆ. ಆ ಊರಿನ ಜಮೀನುದಾರರ ಕುಟುಂಬದ ಅಣ್ಣ ತಮ್ಮಂದಿರು ಹೊಡೆದಾಡಿ ಆಸ್ತಿಭಾಗಕ್ಕೆ ಪಟ್ಟುಹಿಡಿದು ಕೂತಿದ್ದರು. ಅಪ್ಪಯ್ಯ ಯಾರಿಗೂ ಅನ್ಯಾಯವಾಗದ ಹಾಗೆ, ಎಲ್ಲರ ಕಣ್ಣಿಗೂ ಸಮಸಮ ಬೆಣ್ಣೆ ಹಚ್ಚಿದ ಹಾಗೆ ಪಾಲುಹಾಕ ಬೇಕಿತ್ತು. ನ್ಯಾಯಬದ್ಧವಾಗಿ ಪಾಣಿಪಟ್ಟಿ ಬರೆದು ಕೊಡಬೇಕಿತ್ತು. ದಾರಿಯಲ್ಲೆಲ್ಲ ಒಂದೂ ಮಾತಾಡದ ಅವರ ತಲೆಯಲ್ಲಿ ಅದರದೇ ಗುಂಗು ಇದ್ದ ಹಾಗಿದ್ದ ಇತ್ತು.

ಹೀಗೆ ಹೊರಟು ಅರ್ಧದಾರಿ ಕ್ರಮಿಸಿಯಾಗಿತ್ತು. ಅಪ್ಪಯ್ಯ ಮೊದಲು ತಮ್ಮ ಬೀಸು ನಡಿಗೆಯನ್ನು ನಿಧಾನಿಸಿದರು. ಆಮೇಲೆ ದಾರಿಯಿಂದ ತುಸು ಪಕ್ಕ ಸರಿದು ಅಲ್ಲಿ ಬೆಳೆದು ನಿಂತಿದ್ದ ದೊಡ್ಡ ಹೊಂಗೆಮರಕ್ಕೆ ಕೈಯಾನಿಸಿ ನಿಂತರು. ನಡೆಯುವಾಗ, ಕಾಲುದಾರಿಯಲ್ಲಿ ಅವರು ಹಾಗೆ ನಿಂತರೆಂದರೆ ಬಾಯಿಗೆ ಕವಳ ಹಾಕುತ್ತಾರೆ ಎಂದರ್ಥ. ದೂರದಲ್ಲಿ ನಾನೂ ನೋಡುತ್ತ ನಿಂತೆ. ಅವರು ಟೊಂಕಕ್ಕೆ ಸಿಕ್ಕಿಸಿದ್ದ, ಹತ್ತಾರು ಖಾನೆಗಳಿರುವ—ಒಂದರಲ್ಲಿ ಹೋಳಡಿಕೆ, ಇನ್ನೊಂದರಲ್ಲಿ ಕಾಚು, ಇನ್ನೊಂದರಲ್ಲಿ ಲವಂಗ-ಏಲಕ್ಕಿಯ ಚೂರು, ಇನ್ನೊಂದರಲ್ಲಿ ಸುಣ್ಣದ ಡಬ್ಬಿ, ಇನ್ನೊಂದರಲ್ಲಿ ಹೊಗೆ ಸೊಪ್ಪಿನ ಬೇರು-ಚೀಲವನ್ನು ಟೊಂಕದಿಂದ ಹೊರಗೆಳೆದರು. ಚೀಲದ ಗಂಟುಬಿಚ್ಚಿ, ಎರಡು ಮೂರೆಲೆ ಹೊರ ತೆಗೆದು, ಅವನ್ನು ಉದ್ದಕ್ಕೆ ಅರ್ಧಮಡಚಿ ಎಳೆಯನ್ನು ಉಗುರಿಂದ ಗೀರಿ ತೆಗೆದು ಸುಣ್ಣ ಹಚ್ಚಿದರು. ಆಮೇಲೆ ಹೆಬ್ಬೆರಳಿಗೆ

ಇನ್ನಷ್ಟು ಸುಣ್ಣ ಮೆತ್ತಿಕೊಂಡು, ಹಲ್ಲಿಗೆ ಸಿಕ್ಕಿಸಿಕೊಂಡರು. ಬಾಯಿಗೆ ಅಡಿಕೆ ಹೋಳು ಎಸೆದು ಕಟುಂ ಅನಿಸಿದರು. ಎಲೆಯೊಂದಿಗೆ ಲವಂಗದ ತುಂಡಿಟ್ಟು, ಎಲೆಯನ್ನು ಬಾಳೆದಿಂಡಿನ ಹಾಗೆ ಸುತ್ತಿ ಬಾಯಿಗಿಟ್ಟು ಅಗೆದು-ಚೀಲವನ್ನು ಮತ್ತೂ ಅಗಲಿಸಿ ಹೊಗೆಸೊಪ್ಪಿನ ತುಂಡು ತೆಗೆದು ಅಂಗೈಯಲ್ಲಿ ತೀಡಿ ದವಡೆಗೆ ತುರುಕಿದರು. ಹಾಗೇ ನಮುಲುತ್ತ ಕಣ್ಣುಮುಚ್ಚಿದರು. ಹಾಗವರು ಒಂದೆರಡು ನಿಮಿಷ ಧ್ಯಾನ ಮಾಡುವಂತೆ ಕಣ್ಮುಚ್ಚಿದ್ದಾದ ಮೇಲೆ ಅವರ ಬಾಯೆಲ್ಲ ಕೆಂಪು, ಕೆಂಪು ಕೆಂಪು.

ನಾನು, ಅಪ್ಪಾಜಿ ತಮ್ಮ ಕವಳ ಲೋಕದಲ್ಲಿ ಮುಳುಗಿದಾಗ ನನ್ನ ಹೆಗಲ ಚೀಲ ಮಾತು ಮಾತಿಗೆ ಕೆಳಗಿಳಿದು ಬರುವುದನ್ನು ಮೇಲಕ್ಕೇರಿಸಿ ಆಸಕ್ತಿಯಿಂದ ಅವರನ್ನು ನೋಡುತ್ತ ನಿಲ್ಲುವುದು. ನಡುವೆ ಅವರು ಕಣ್ತೆರೆದು ಅತ್ತಿತ್ತ ನೋಡುವಾಗ, ಮನೆಯಿಂದ ಬರುವಾಗ ಅಮ್ಮ ಪೈಜಾಮದ ಕಿಸೆಗೆ ಹಾಕಿ ಕಳಿಸಿದ ಕೊಬ್ಬರಿ ತುಂಡೋ, ಕಲ್ಲುಸಕ್ಕರೆ ತುಂಡೋ ಬಾಯಿಗೆ ಹಾಕಿಕೊಳ್ಳುವುದು. ಹಾಗೆ ಹಾಕಿಕೊಳ್ಳುವಾಗ ಅಪ್ಪಯ್ಯ ಅಕಸ್ಮಾತ್ ನೋಡಿದರೆ ಪೆದ್ದಾಗಿ ನಕ್ಕು ಬಿಡುವುದು. ಅಪ್ಪಯ್ಯ ಹೇಳುತ್ತಿದ್ದರು : 'ಎಷ್ಟು ಚೆನ್ನಾಗಿ ನಗ್ತೀಯೋ ಕೃಷ್ಣ. ಹಾಗೆ, ಮೊದಲು ಮನಸ್ಸು ತುಂಬಿ ನಗುದನ್ನ ಕಲಿಬೇಕು'. ನನಗೋ ಅಪ್ಪಯ್ಯನ ಮಾತು ; ಅವರ ಪ್ರತಿ ಚಟುವಟಿಕೆಯೂ ಕಿವಿಗೆ ಹಿತ-ಕಣ್ಣಿಗೆ ಹಬ್ಬ, ಜಾತ್ರೆ. ಪ್ರತಿ ಕೆಲಸದಲ್ಲೂ ಅವರ ಶಿಸ್ತು-ಸಂಯಮ, ಕಲೆಗಾರಿಕೆ-ಚಾಕಚಕ್ಯತೆ ನೋಡುವುದು ; ತಾನೂ ಅದನ್ನು ಕಲಿಯುವುದು, ಕಲಿತು ಪಳಗುವುದು, ನನ್ನ ಆಗಿನ ಧ್ಯೇಯ. ಅವರು ಹೆಬ್ಬೆರಳು-ತೋರು ಬೆರಳಿನ ನಡುವೆ ಲೆಕ್ಕಣಿಕೆ ಸಿಕ್ಕಿಸಿ, ಅದರ ಪತ್ತಿಯ ತುದಿಯನ್ನು ಮಸಿಯ ದವುತಿಯಲ್ಲದ್ದಿ, ಒಮ್ಮೆ ನವಿರಾಗಿ ಮುಸಿ ಚಿವುಕಿಸಿ, ಕಂದು ಬಣ್ಣದ ವಿಲಾಯಿತಿ ಕಾಗದದ ಮೇಲೆ ಮುತ್ತಿಟ್ಟ ಹಾಗೆ ಜೀರಿಗೆ ಅಕ್ಷರಗಳಿಂದ ಪಾಣಿಪುಸ್ತಕ ಬರೆಯುವುದನ್ನು ಅವರೆದುರು ಕೂತು ನೋಡುವುದು-ಆಮೇಲೆ ಅಂಚಿಕಡ್ಡಿಯಿಂದ ಬಣ್ಣದ ನೀರಲ್ಲಿ ನಾನೂ ಅವರಂತೆ ಬರೆಯಲು ಯತ್ನಿಸುವುದು-ತೋಟದಲ್ಲಿ. ನಸುಕಿನ ಕಾವಳದಲ್ಲಿ ಎದ್ದು ತಮ್ಮ ಅಂಗವಸ್ತ್ರ, ಪಂಚೆ, ನೆಹರು ಶರ್ಟ್‌ಗಳನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ಹೊಳೆಯ ಮೊಸಳೆ ಕಪ್ಪು ಬಂಡೆಯ ಮೇಲೆ ಸಬಕಾರ ಹಚ್ಚಿ, ಅಂಟಳಿಗೆ ಕಾಯಿಯಲ್ಲಿ ಉಜ್ಜಿ

ಮಿರಿಮಿರಿ ಹೊಳೆವಂತೆ ಒಗೆದು ತಂದದ್ದು ನೋಡಿ ನಾನೂ ಅಮ್ಮನ ಸೀರೆ, ನನ್ನ ಬಟ್ಟೆ ಎಷ್ಟು ಸಲ ಒಗೆದು ತಂದಿಲ್ಲ ? ಈಗಲೂ ನನ್ನ ಬಟ್ಟೆಯನ್ನು ಬೇರೆ ಯಾರೇ ಒಗೆದು ಹರವಿದರೂ ಸಮಾಧಾನವಾಗುವುದಿಲ್ಲ. ಅಪ್ಪಯ್ಯ ನಂತೆ ನಾನೇ ಹೊಳೆದಂಡೆಗೆ ಹೋಗಿ ಒಣಗಿಸಿ ತಂದರೇನೇ ತೃಪ್ತಿ. ಅಲ್ಲಿಂದ ಬರುವಾಗ ಬಸಳೆ, ರಾಜಗಿರಿ, ಪಾಲಕ ಸೊಪ್ಪು ಕೀಳಿ ಕೈಯಲ್ಲಿ ಹಿಡಿದುಕೊಂಡು ಬಂದರೇನೇ ಸಮಾಧಾನ.

ಕಣ್ಮುಚ್ಚಿ ನಿಂತ ಅಪ್ಪಯ್ಯ ಮೆಲ್ಲಗೆ ಎವೆ ತೆರೆದರು. ಬಾಯಿ ತುಂಬಿದ್ದ ಕವಳದ ರಸವನ್ನು ಹೊಂಗೆ ಮರದ ಬದಿಯಲ್ಲಿ ಟಿಸಿಲೊಡೆದು ಸಣ್ಣಗೆ ಜುಳು ಜುಳು ಹರಿಯುತ್ತಿದ್ದ ನದಿ ನೀರಿಗೆ ತುಟಿಗಳ ಮಧ್ಯೆ ಎರಡು ಬೆರಳಿಟ್ಟು ಪಿಚ ಕ್ಕನೆ ಉಗಿದರು : ನಾನದನ್ನೆ ನೋಡುತ್ತ ನಿಂತೆ. ಹಾಗವರು ಬಾಯಲ್ಲಿನ ರಸ ಹೊರ ಹಾಕಿದರೆ ಮಾತಿಗೆ ತೊಡಗುತ್ತಾರೆಂದು ಅರ್ಥ : ನಾನದನೆ ಕಾಯುತ್ತ ನಿಂತೆ. ಅವರು ಮತ್ತೊಮ್ಮೆ ರಸ ಉಗಿದರು : ಈ ಸಲ ನನ್ನ ಹೆಸರನ್ನವರು ಕೂಗುತ್ತಾರೆಂದು ಕುತೂಹಲದಲ್ಲಿ ನಿರುಕಿಸುತ್ತ ನಿಂತೆ. ಅಪ್ಪಯ್ಯ ಕಪ್ಪುಕೋಟಿಗಿಳಿಬಿದ್ದ ಜರಿಶಲ್ಯ ಒಮ್ಮೆ ತೆಗೆದು ಒದರಿ ಮತ್ತೆ ಹೊದ್ದರು. ಮನಸ್ಸಿನಲ್ಲಿಯೇ ಏನೋ ತೂಗಿ, ಗುಣಿಸಿ ಅದನ್ನು ಮಾತಲ್ಲಿ ಹೊರಗಿಡುವ ಮುಂಚೆ ಅವರು ಮಾಡುತ್ತಿದ್ದುದೇ ಹಾಗೆ. 'ಲೋಕಾ ರೂಢಿಗೆ ಆಗಲಿ ಆಡಿದ ಪ್ರತಿ ಮಾತು ಸದ್ವಿನಿಯೋಗವಾಗಬೇಕು, ಮಾತಿ ನಿಂದ ಅಂದ ಹೆಚ್ಚಬೇಕು. ಆಡಿದ ಮಾತಿನ ವಿಷಯ ಎದುರಿಗಿದ್ದವರಿಗೆ ಮನವರಿಕೆಯಾಗಿ ಗೌರವ ಮೂಡಬೇಕು—ಈ ಹೊತ್ತು ನಾವು ಆಡೋ ಮಾತು ಮುಂದೆ ತಲತಲಾಂತರವರೆಗೂ ಭೂಮಿಯ ಮೇಲಿರುತ್ತದೆ-ಸಮು ದ್ರದ ಒಳ ಆಳದಲ್ಲೂ ಬೆಳಕಿನ ಕಿರಣ ಅಡಗಿರೋ ಹಾಗೆ' ಎಂಬುದು ಅವರ ನಂಬಿಕೆ. ವಂಶದಲ್ಲಿ ಒಳ್ಳೆ ಫಲಹುಟ್ಟಬೇಕಾದರೆ, ವೃಕ್ಷ ಬೆಳೀ ಬೇಕಾದರೆ, ವಂಶ ಸಾರ್ಥಕವಾಗಬೇಕಾದರೆ ನಮ್ಮ ಮನಸ್ಸು-ಮಾತು ಶುದ್ಧವಾಗಿರ ಬೇಕೋ. ಮನಸ್ಸು : ಸೃಷ್ಟಿಸುವ ಗಳಿಗೆಯಲ್ಲಿ ಖಾಲಿಯಾಗಿರುವ, ಆಮೇಲೆ ತುಂಬಿಕೊಂಡು ತುಳುಕುವ ಕಲಾವಿದನ ಮನಸ್ಸಾಗಿರಬೇಕು. ಒಮ್ಮೆ ಬೇಲೂ ರಿಗೆ ಹೋಗಿ ಬಾ-ಆಗ ತಿಳಿಯುತ್ತೆ— ಇದೂ ಅವರ ನಂಬಿಕೆಯೇ. ಈಗ ಅಪ್ಪಯ್ಯ-ಮರೀ, ಶ್ರೀಕೃಷ್ಣ-ಅಂದರು. ನಾನು ಮೌನವಾಗಿ ಅವರ ದನಿಗೆ

ಹೆಜ್ಜೆಯಾಗಿ ಅವರೆದುರು ನಿಂತೆ. ಆಗವರು ಮತ್ತೊಮ್ಮೆ ಮೆಲ್ಲನೆ ಕೃಷ್ಣ ಎಂದು ತುಂಬು ಕೊರಳಲ್ಲಿ ಕರೆದು ಎದುರು ನಿಂತಿದ್ದ ನನ್ನ ಭುಜದ ಮೇಲೆ ಬಲಗೈಯನ್ನಿಟ್ಟರು.

'ನೋಡೋ ಕೃಷ್ಣಾ, ನಾವು ಜೀವಿಗಳು ಬದುಕಿರುದು, ಬದುಕನ್ನ ಕಲಿ ಬೇಕಿರುದು ಈ ಕಾಡು, ಮರ–ಗಿಡ, ಪ್ರಾಣಿ ಪಕ್ಷಿಗಳಿಂದಾನೋ. ನೀನು ಈ ಕಾಡಂತೆ, ಹಕ್ಕಿ ಹಿಂಡಿನಂತೆ, ಜಿಂಕೆ ಮರಿಯಂತೆ ನೋಡುವವರ ಕಣ್ಣಿಗೆ ಸಾರ್ಥಕ ಅನಿಸುವಂತೆ ಬಾಳು ಬೆಳಗಿಸಬೇಕೋ. ನಿನ್ನ ಕಣ್ಣು ಜಿಂಕೆ ಮರಿಯ ಕಣ್ಣಿನಷ್ಟೇ, ದೇವರಗೂಡಿನ ನಂದಾದೀಪದಷ್ಟೇ ನಿಷ್ಕಲ್ಮಶವಾಗಿರಬೇಕು– ಸ್ವಚ್ಛವಾಗಿರಬೇಕು. ಅಳುಬಂತಾ ? ನೋಡಿಲ್ಲಿ : ಹರಿದು ಹೋಗ್ತಿದೆಯಲ್ಲ ನದಿ ನೀರು ಅಷ್ಟೇ ಸರಳವಾಗಿ, ನೇರವಾಗಿ ಕಣ್ಣಲ್ಲಿ ನೀರು ತುಂಬಿಕೊಂಡು ಅತ್ತು ಹಗುರಾಗಿಬಿಡು. ಖುಷಿಯಲ್ಲಿ ನಗಬೇಕೆನಿಸಿದರೆ ಗಾಳಿಬಂದಾಗ ಮರ ದೆಲೆಗಳು ತಲೆದೂಗಿ ಕಿಲಕಿಸುತ್ತವಲ್ಲ ಹಾಗೆ ಬಾಯಲ್ಲಿನ ಹಲ್ಲೆಲ್ಲ ಹೊಳೆವ ಹಾಗೆ ನಕ್ಕುಬಿಡು. ಕಷ್ಟಕ್ಕೆ, ನೋವಿಗೆ ಆ ಕಪ್ಪುಬಂಡೆ ನಿರುಮ್ಮಳವಾಗಿ ಲಕ್ಷ ವರ್ಷಗಳಿಂದ ನಿಂತಿದೆಯಲ್ಲ ಹಾಗೆ ತಾಳ್ಮೆ ವಹಿಸಿಬಿಡು. ಈಗ ಕಣ್ಮುಚ್ಚಿ ನಿನ್ನಷ್ಟಕ್ಕೇ ಅಂದುಕೋ : ಆ ಬಂಡೆಯೊಳಗೊಂದು ಜೀವ ಅಡಗಿದೆ. ಅದಕ್ಕೂ ಭಾವನೆ, ಉದ್ರೇಕ, ದುಮ್ಮಾನ, ನೀರಡಿಕೆ.... ಎಲ್ಲ ಇವೆಯಂತ. ಆಗ ಗೊತ್ತಾಗುತ್ತೆ– ನಮಗೆ ಗೊತ್ತೇ ಇರದಷ್ಟು ವರ್ಷಗಳಿಂದ ಈ ಬಂಡೆ ಛಳಿ–ಮಳೆ ಏನೆಲ್ಲ ಸಹಿಸಿ ಏನೂ ಆಗದ ಹಾಗೆ ನಿಂತಿದೆಯಲ್ಲ, ಅದು ಹೇಗೆ ಸಾಧ್ಯ ಅಂತ. ಕತ್ತಲೆಯಲ್ಲಿ ದಾರಿ ಕಾಣದೆ ಹೋದೆ ಅಂತಿಟ್ಟುಕೋ– ಕಂಗಾ ಲಾಗಬೇಡ. ಬೆಳಗಿನ ಮಿಣುಕು ಹುಳು, ನಕ್ಷತ್ರಗಳನ್ನ ಕೈಮುಗಿದು ಪ್ರಾರ್ಥಿಸು ಅವು ನಿನ್ನ ಕೈಹಿಡಿದು ನಡುಸುತ್ತವೆ.... ಇಲ್ಲಿ ಯಾರೂ ಯಾವುದೂ ಕ್ಷುದ್ರ ಜೀವಿಯಲ್ಲ. ಎಲ್ಲರಿಗೂ ಅವರವರದೇ ಬೆಳಗಿಸುವ ಬೆಳಕಿದೆ....'

ಇಷ್ಟು ಹೇಳಿ ಒಂದೆರಡು ಕ್ಷಣ ಸುಮ್ಮನಾದರು. ನಾನು ಹೊಳೆವ ಅವರ ಕಂಗಳನ್ನೇ ನೋಡುತ್ತಿದ್ದೆ. ಅಪ್ಪಯ್ಯ ತಮ್ಮ ಪಂಚೆಯ ನೆರಿಗೆಯನ್ನು ಮೇಲಕ್ಕೆಳೆದು ಟೊಂಕಕ್ಕೆ ಕಟ್ಟಿ ಹರಿವ ನೀರಿನ ಸಣ್ಣ ಕಲ್ಲಿನ ಬಳಿ ಕೂತು, ಬಾಗಿ ನೀರಲ್ಲಿ ಬಾಯಿಮುಕ್ಕಳಿಸಿದರು. ಕತ್ತಲು ಮೆಲ್ಲಗೆ ಕಡಿಮೆಯಾಗಿ, ಬೆಳಕು ಮೂಡುವ, ಕತ್ತಲೆ ಹಿಂಸರಿಯುವ ಗಳಿಗೆ. ಅಪ್ಪಯ್ಯ ಬೊಗಸೆಯಲ್ಲಿ

ನೀರು ತೆಗೆದುಕೊಂಡು ಮುಖಕ್ಕೆ ಹಾಕಿಕೊಂಡು ಮೇಲೆ ಬಂದು ಶಲ್ಯದಿಂದ ಮುಖವರೆಸಿಕೊಂಡರು. ನಾನು ಮೊದಲಿನ ಹಾಗೆ ನಿಂತೇ ಇದ್ದೆ. ಇನ್ನೂ ಹತ್ತಿರ ಬಂದು ಆಪ್ತವಾಗಿ ಅರೆಗಳಿಗೆ ನೋಡಿ ತಬ್ಬಿಬಿಟ್ಟರು. ನನ್ನ ಗಂಟಲಿನ ನರ ಅವರ ಪ್ರೀತಿಯ ಅಪ್ಪುಗೆಗೆ ಬಿಸಿಯಾಯಿತು. ಅವರೆಂದರು :

'ನಿನ್ನ ಮುಖದ ಮೇಲೆ ಸದ್ಗೃಹಸ್ಥನ ಪ್ರಭೆಯಿದೆ. ವಂಶಬೆಳೆಸಿ, ಒಳ್ಳೆಯ ಮಕ್ಕಳನ್ನು ಲೌಕಿಕಕ್ಕೆ ಕೊಡುವ 'ಸಂತಾನ ರೇಖೆ'ಯಿದೆ. ನನಗಂತೂ ಆಸ್ತಿ ಪಾಸ್ತಿಯಲ್ಲಿ ನೆಚ್ಚಿಗೆ ಇಲ್ಲ. ಇಷ್ಟು ಸಾಕೀ ಜೀವಕ್ಕೆ ಅನ್ನುವವ ನಾನು. ಇದ್ದ ಬದ್ದ ಜಮೀನೆಲ್ಲ ನನ್ನ ತಮ್ಮಂದಿರು ಮೈಸೂರು ಪೇಟೆಯ ಸಾನಿಬೀದಿಯಲ್ಲಿ ಕಳೆದದ್ದು ನಿನಗೆ ಗೊತ್ತೇ ಇದೆ. ಆದರೆ ನೀನು ಈಗಿರುವ ನೆಲವನ್ನು ಹದಗೊಳಿಸು, ಅರಳಿಸು. ನಮ್ಮ ಮುಂದಿನ ಪೀಳಿಗೆಗೆ ಸದುಪಯೋಗವಾಗುವ ಹಾಗೆ. ಆದರೆ ಒಂದು ನೆನಪಿಟ್ಟುಕೊಳ್ಳೋ : ಹೆಣ್ಣನ್ನ–ಮಣ್ಣನ್ನ ಗೆಲ್ಲುತೀನಿ ಅನ್ನೋ ಅಹಂನ ಛಲದಲ್ಲಿ ಹೋಗಬಾರದು. ಎರಡನ್ನೂ ಒಲಿಸಿಕೊಳ್ಳಬೇಕು. ಅಲ್ಲಿ ಬೇಕಿರೋದು ವಿನಯ, ಸೊಕ್ಕಲ್ಲ. ಎಂಥ ನೋವಲ್ಲೂ ನಾವು ನಗುದನ್ನ ಕಲಿತುಕೋಬೇಕು. ಮನಸಲ್ಲಿ ರಾಡಿ ಇಟ್ಟುಕೊಳ್ಳದೆ– ಬೇರೆಯವರು ತಪ್ಪು ಮಾಡಿದರೂ ಅವರನ್ನ ಕ್ಷಮಿಸಿ ಬಿಡಬೇಕು. ಅಂದರೇನೇ ನಾವು ಬೆಳೆಯುದು. ಇಲ್ಲದಿದ್ದರೆ ಅವರ ಹಾಗೆ ನಾವುನೂ ಸಣ್ಣವರಾಗಿಬಿಡ್ತೀವಿ....'

ಅಪ್ಪಯ್ಯ ಮತ್ತೊಮ್ಮೆ ಬೆನ್ನ ಮೇಲೆ ಕೈಯಾಡಿಸಿ ನಡೀ ಹೋಗುವ ಅಂದರು. ದಾಪುಗಾಲಿಟ್ಟರು. ನಾನು ಅವರ ಸಮ ಸಮ ಹೆಜ್ಜೆ ಇಟ್ಟೆ. ಈಗ ನಸುಕು, ಕತ್ತಲು ಹೋಗಿ ಕೆಂಬಣ್ಣ ಎಲ್ಲೆಡೆ ಹರಿಡಿತು. ನಾವು ದಿನ್ನೆ ಏರುತ್ತಿದ್ದೆವು. ನೂರು ಹೆಜ್ಜೆಗಳಷ್ಟು ಮುಂದೆ ಹೋದರೆ ದಿನ್ನೆ ಮುಗಿದು–ಕಣಿವೆ. ಅಪ್ಪಯ್ಯ ಒಮ್ಮೆ ಮಾತು ನಿಲ್ಲಿಸಿದರೆ ಆಮೇಲೆ ಸುಮಾರು ಹೊತ್ತು ಮಾತಾಡರು. ಅವರ ಮಾತು ಕೇಳುವುದೆಂದರೇನೇ ಹಸಿವು–ನೀರು ಮರೆತು ಖುಷಿಯಾಗುವ ಮನಸ್ಸು–ವಯಸ್ಸು ನನ್ನದು. ಆದರೆ ಅವರದು ತೂಕದ–ನಿಧಾನದ; ಸಮವಿರಾಮದ ನಂತರ ಗುಟುರು ಹಾಕಿ ಮೌನವಾಗಿಬಿಡುವ ಕಾಡುಹಕ್ಕಿಯ ಹಾಡಿನ ಹಾಗೆ ಮಾತು. ದಿನ್ನೆ ಇನ್ನೇನು ಮುಗಿಯುತ್ತ ಬಂದಿತ್ತು. ಕಾಡಿನ ನಡುವಿಂದ ; ಆಚೆಗಿನ ಬೆಟ್ಟದಿಂದ ಸೂರ್ಯಗೋಲ

ಮೆಲ್ಲ ಮೆಲ್ಲನೆ ಮೇಲೇಳುತ್ತ ಫಳಿಸುತ್ತಿತ್ತು. ಅಪ್ಪಯ್ಯ ಇದ್ದಕ್ಕಿದ್ದ ಹಾಗೆ ತಟ್ಟನೆ ನಿಂತರು: ನಾನೂ. ಅವರ ಬಲಗೈ ತೋರು ಬೆರಳನ್ನು ಮುಂದೆ ತಂದು ದಿಗಂತದತ್ತ ಎತ್ತಿದರು. 'ಕೃಷ್ಣಾ ಅಲ್ಲಿ ನೋಡೋ'– ನುಡಿದದ್ದು ಅವರ ಬಾಯಿಯೇ. ಆದರೆ ಆ ದನಿಯಲ್ಲೇನೋ ಅಭೂತಪೂರ್ವ ಅನುಭವ ನೀಡುವ ಮಾಂತ್ರಿಕತೆ. ನಾನು ದಿಗಂತದತ್ತ ನೋಡಿದೆ: ಕೆಂಗುಲಾಬಿ ಆಕಾಶದ ತುದಿಯಿಂದ ಬೆಳ್ಳಕ್ಕಿಯೊಂದು ತನ್ನ ವಿಶಾಲ ರೆಕ್ಕೆ ಬಿಚ್ಚಿ ಸ್ವಲ್ಪವೂ ಅಲುಗದ ಹಾಗೆ ನೇರಕ್ಕೆ ಹಾರುತ್ತ ಹೋಗುತ್ತಿತ್ತು. ನನ್ನ ಮೈಯೆಲ್ಲ ಬೆಚ್ಚ ಗಾಯ್ತು. ಮತ್ತೂ ನೋಡಿದೆ: ನೋಡುತ್ತ ಹೋದ ಹಾಗೆ ಒಂದಿದ್ದ ಬೆಳ್ಳಕ್ಕಿ ಎರಡಾಯಿತು. ಮತ್ತೂ ನೋಡಿದೆ: ಎರಡೂ ಬೆಳ್ಳಕ್ಕಿಗಳು ತಮ್ಮ ಅಗಲಗಲ ರೆಕ್ಕೆಗಳ ಬೀಸಿ ಸೂರ್ಯಗೋಲದತ್ತ ನಡೆದವು. ಮತ್ತೂ ನೋಡಿದೆ: ಎರಡಿದ್ದ ಬೆಳ್ಳಕ್ಕಿ ಮೂರು, ನೂರು, ಸಾವಿರ, ಸಾವಿರ, ಆದ ಹಾಗಾಗಿ ದಿಗಂತವೆಲ್ಲ ಬೆಳ್ಳಕ್ಕಿ ಹಿಂಡು ತುಂಬಿ, ಮೈಕೂದಲು ನಿಮಿರಿ ನಿಂತು– ತಲೆಗೆಲ್ಲ ಬಿಸಿರಕ್ತ ಚಿಮ್ಮಿತು. ಮತ್ತೂ ನೋಡಿದೆ: ಆ ಎಲ್ಲ ಬೆಳ್ಳಕ್ಕಿಗಳು ಕೆಂಬಣ್ಣದ ಸೂರ್ಯಗೋಲವನ್ನು ಒಂದೊಂದಾಗಿ ಸೇರಿದ ಹಾಗಾಯ್ತು. ನಿಶ್ಚಲನಾಗಿ ನಿಂತ ಕಣ್ಣೊಳಗೇನೋ ಬೆಳಕು ಹೊಕ್ಕ ಹಾಗೆ: ಮೈಯಲುಗಿಸಿ ಸಾಕ್ಷಾತ್ಕಾರ ನೀಡಿದ ಹಾಗೆ. ತುಸು ಹೊತ್ತಿಗೆ ಬೆಳ್ಳನೆಯ ಬೆಳಕು ಮೂಡಿ ಬಂದು– ಅಪ್ಪಯ್ಯ ಒಂದು ಮಾತಾಡದೆ ಮುನ್ನಡೆದರು– ಅವರ ಪಕ್ಕ ನಾನು.

ಸಂಪಿಗೆ ಹಳ್ಳಿ ಮುಟ್ಟಿದಾಗ ಎಂಟರ ಜಾವ. ಹಾಲಕ್ಕಿ ಗೌಡರಮನೆಗೆ ಹೋದೆವು. ದೊಡ್ಡ ಜಗುಲಿಗಂಬದ, ಕಪ್ಪನೆಯ ತೊಲೆ ಜಂತಿಯ ಮನೆ. ನ್ಯಾಯ ತೆಗೆದು ಪಾಲು ಕೇಳಿ ಪಟ್ಟುಕೂತ. ಅಣ್ಣತಮ್ಮಂದಿರು ಸೇರಿದರು. ನಾನು ಯೋಚಿಸಿದೆ: ಪಾಲಾದ ಮೇಲೆ ಈ ದೊಡ್ಡಮನೆಯ ಉದ್ದಗಲಕ್ಕೂ ಅಡ್ಡಡ್ಡ ಗೋಡೆಗಳು ಏಳುತ್ತವೆ. ಆಶ್ಚರ್ಯವೆಂದರೆ ದೊಡ್ಡ ಜಗಳವೇ ಆಗಿ– ಕೈಕಾಲು ಕತ್ತರಿಸುವ ಮಟ್ಟಕ್ಕೆ ಹೋಗುತ್ತದೆಂದು ಅಂದುಕೊಂಡಿದ್ದ ಆಸ್ತಿಪಾಲು– ಹಾಗೇನೂ ಆಗದೆ ಸರಾಗವಾಗಿ ನಡೆದದ್ದು. ಅಪ್ಪಯ್ಯ ಹೇಳಿ ದ್ದಕ್ಕೆ ಅವರು ಹಂಚಿದ ಭಾಗಕ್ಕೆ ಯಾರೂ ತುಟಿಬಿಚ್ಚದೆ– 'ಅಯ್ಯನವರು ಹೇಳಿದ್ದಕ್ಕೆ ನಮ್ಮದೇನೂ ತಕರಾರಿಲ್ಲ'– ಎಂದು ಒಪ್ಪಿಕೊಂಡಿದ್ದು. ಅಪ್ಪಯ್ಯ ಸಾಮಾನು–ಸರಂಜಾಮು ಪಟ್ಟಿ ಮಾಡಿ, ಜಮೀನು ಭಾಗಿಸಿ ಅವರ

ವರ ಹೆಸರಿಗೆ ಪಾಣಿಪಟ್ಟಿ ಬರೆದು ಯಾರ್ಯಾರಿಗೆ ಯಾವ ಬಾಬು ಸೇರಬೇಕೆಂದು ತೀರ್ಪುನೀಡಿದಾಗ- ಅಪರಾಹ್ನ.

ಹಾಲಕ್ಕಿ ಒಕ್ಕಲಿಗರು ಮೊದಲು ಹಾಲು ಬೆಲ್ಲ ಕೊಟ್ಟರು. ತುಸು ಹೊತ್ತಿಗೆ ಊರಿನ ಹನುಮಂತನ ಗುಡಿಯಲ್ಲಿ ಊಟಕ್ಕೆ ಏರ್ಪಾಡು ಮಾಡುವು ದಾಗಿ ಹೇಳಿದರು. ಆದರೆ ಹಾಲು-ಬೆಲ್ಲ ಮುಗಿಸಿದ್ದೇ ಅಪ್ಪಯ್ಯ ಹಾಗೆ ಬೇರೆ ಮತಸ್ಥರ ಮನೆಯಲ್ಲಿ ಊಟ ಮಾಡಬಾರದೆಂಬ ಕರಾರು ನೇಮ ಇಲ್ಲ ದಿದ್ದರೂ ಚಪ್ಪಲಿ ಮೆಟ್ಟಿ ಹೊರಟು ನಿಂತರು. ಅಪ್ಪಯ್ಯನ ಮೌನ ನೋಡಿ ಒಕ್ಕಲಿಗರು ಸುಮ್ಮನಾದರು. 'ಊರಿಗೆ ಗಾಡಿ ಕಟ್ಟಿಸಲಾ ಅಯ್ಯವರೆ' ಎಂಬ ದೊಡ್ಡ ಗೌಡರ ಮಾತು ಹೊರಬಂದಾಗ ಅಪ್ಪಯ್ಯ ತಲಬಾಗಿಲು ದಾಟಿ ರಸ್ತೆ ಸೇರಿದ್ದರು. ದೊಡ್ಡಗೌಡರು ನಮಗೆ ಕೊಡುವ ಎಲೆ ತಾಂಬೂಲವನ್ನು ಸಹ ನನ್ನ ಕೈಯಲ್ಲಿಡಲು ಹಿಂದೆ ಮುಂದೆ ನೋಡಿ, ತುಸು ಅಂಜುತ್ತಲೇ ನನ್ನ ಹೆಗಲಿಗಿದ್ದ ಪಾಣಿಪುಸ್ತಕದ ಚೀಲಕ್ಕೆ ತುರುಕಿದ್ದರು. 'ಮುಂದಲ ವಾರ ಅಯ್ನೋರನ್ನ ಮನೇಲಿ ಕಾಣ್ತೆನೆ' ಎಂದು ಮೆಲ್ಲಗೆ ಉಸುರಿದ್ದರು.

ಕಾಡು ದಾರಿಯಲ್ಲೆಲ್ಲ ಅಪ್ಪಯ್ಯನೊಂದಿಗೆ ಸಮ ಮಧ್ಯಾಹ್ನದ ಬಿಸಿ ಲಲ್ಲಿ ಸಮಹೆಜ್ಜೆ ಹಾಕುತ್ತಿದ್ದ ನಾನು ಅಪ್ಪಯ್ಯನ ಮೌನಕ್ಕೆ ಆಶ್ಚರ್ಯಪಡ ಲಿಲ್ಲ. ಹಾಗೇ ನೋಡಿದರೆ ಇಂದು ನಸುಕಿನ ಜಾವದಲ್ಲಿ ಅವರು ತುಸು ಹೆಚ್ಚಿ ಗೇನೆ ಮಾತಾಡಿದ್ದಾರೆಂದು ಅನಿಸಿತು. ಆದರೂ ಮುಂಜಾನೆಯ ಸೂರ್ಯೋ ದಯದ ನಂತರ ಅವರು ಅದೇಕೋ ಒಂದು ಥರಹ ಬದಲಾಗಿದ್ದರು. ಅದನ್ನು ನಾನು ಗುರುತಿಸಿದ್ದೆ. ಬೆಳಿಗ್ಗೆ ಆ ಬೆಳ್ಳಕ್ಕಿಗಳ ಹಿಂಡು ಒಂದೊಂದೇ ಸೂರ್ಯ ಗೋಲ ಸೇರುವಾಗ ತದೇಕಚಿತ್ತರಾಗಿ ನೋಡುತ್ತಿದ್ದ ಅಪ್ಪಯ್ಯ ಕೊಟ್ಟ ಕೊನೆಯ ಬೀಸುರೆಕ್ಕೆಯ ಹಕ್ಕಿ ಮರೆಯಾದಾಗ- ನನ್ನತ್ತ ತಿರುಗಿದ್ದರು. ಆಗ ಅವರ ಎರಡೂ ಕಂಗಳು ನೀರಿಂದ ತುಂಬಿದ್ದವು. ನನಗೆ ಕುಸಿದುಹೋಗುವ ಹಾಗಾಗಿ ವಿಚಲಿತನಾಗಿ ಅವರತ್ತ ದೃಷ್ಟಿಸಿದಾಗ ಮರುಕ್ಷಣಕ್ಕೆ ಸಾವರಿಸಿಕೊಂಡ ಅವರು ಕಣ್ಣೀರನ್ನು ತೊಡೆದು ಒಂದು ನಿಟ್ಟುಸಿರಿಟ್ಟು ಹೆಜ್ಜೆ ಬೆಳೆಸಿದ್ದರು. ಹಾಗೇಕೆ ಅವರ ಕಣ್ಣಲ್ಲಿ ನೀರು ಮಡುವುಗಟ್ಟಿತು, ಆಗ ಅವರ ಮನಸ್ಸಿನಲ್ಲಿ ನಡೆದಿರಬಹುದಾದ ತುಮುಲಾಟವೇನು, ಆದನ್ನೇಕೆ ನನಗವರು ಹೇಳದೆ ಹೋದರು ? ಗೊತ್ತಾಗಲಿಲ್ಲ.

ಇರಲಿ. ಕೆಲವು ವಿಚಾರಗಳು ಗೊತ್ತಾಗದೆ ಹಾಗೆ ಉಳಿದರೇನೆ ಚೆಂದ. ಗೊತ್ತಾದ ಮೇಲೆ ಅದನ್ನು ಕೇಳಿದ ವ್ಯಕ್ತಿಗೆ ಜೀರ್ಣಿಸಿಕೊಳ್ಳುವ ಸ್ಥೈರ್ಯ ವಿರಬೇಕು. ನನಗಾಗ ಅಂತಹ ಸ್ಥೈರ್ಯವಿದೆಯೆಂದು ಅಪ್ಪಯ್ಯಗೆ ಅನಿಸಿದ್ದರೆ– 'ಕೃಷ್ಣಾ ಇದು ಹೀಗೆ ಕಣೋ' ಎಂದು ಹೇಳದೆ ಬಿಡುತ್ತಿರಲಿಲ್ಲ. ಆದರೆ ಬೆಳಗಾನ ಮಾತಾಡದ ಅಪ್ಪಯ್ಯ ಪಾಲು ಮಾಡಿ ಮರಳಿ ಬರುವಾಗ ಆಡಿದ ಒಂದು ಮಾತು ಇನ್ನೂ ಚೆನ್ನಾಗಿ ನೆನಪಿದೆ.

'ನೋಡಿದೆಯೇನೋ ಕೃಷ್ಣಾ, ದೊಡ್ಡ ಮನೆಯು, ದೊಡ್ಡವರ ಸಹವಾಸ– ಅವರ ಮನಸ್ಸು. ಒಂದು ತಿಳಿದುಕೋ ಮರಿ ಈ ಭಾಗ ಅನ್ನೋದು ಯಾಕೆ ಹುಟ್ಟುತ್ತೆ ಗೊತ್ತಾ ? ಮೊದಲು ಮನಸ್ಸಲ್ಲಿ ಅಸಮಾಧಾನ ಹುಟ್ಟುತ್ತೆ. ಆಮೇಲೆ ವ್ಯಕ್ತಿಯ ಏಳಿಗೆಯ ಬಗ್ಗೆ ಈರ್ಷ್ಯೆ–ದ್ವೇಷ ಹುಟ್ಟುತ್ತೆ. ಆಮೇಲೆ ಮನಸ್ಸು ಒಡೆಯುತ್ತದೆ. ಆಮೇಲೆ ಮನೆ–ನೆಲ ಎಲ್ಲ ಒಡೆದು ಚೂರಾಗುತ್ವೆ. ಆಗ ಮಾತ್ರ ಮನಸ್ಸಿನ ಪಾಪವಿಗೆ ಸಮಾಧಾನ. ವ್ಯಕ್ತಿ ತಾನು ಬೆಳೆಯಲು- ಏಳಿಗೆ ಹೊಂದಲು ಸಾಧ್ಯವಾಗುವುದಿಲ್ಲ ಅಂದಾಗ ಹತ್ತಿರದವರ– ಆತ್ಮೀಯರ ಏಳಿಗೆ ಸಹಿಸುಲ್ಲ. ಅಂಥವರ ವ್ಯಕ್ತಿತ್ವಕ್ಕೆ ಕಲಂಕ ತರಲು, ಮಸಿ ಹಚ್ಚಲು ನೋಡುತ್ತಾನೆ– ನಿನ್ನ ಬದುಕಿನಲ್ಲಿ ಅಂಥವರು ಬಂದರೆ ಅದನ್ನ ಮೀರಿ, ಅಂಥದ್ದನ್ನೂ ನಕ್ಕು ಗೇಲಿ ಮಾಡಿ ನೀ ಬೆಳಿಬೇಕು, ನೋಡು...

# .ಗೋಲ

ವಾಪಸ್ಸು ಹಳ್ಳಿಗೆ ಬಂದಾಗ ಬಿಸಿಲು ಮಾಗಿತ್ತು. ಸೂರ್ಯಗೋಲ ಸ್ವಲ್ಪಸ್ವಲ್ಪವೇ ಹಳ್ಳಿಯ ಬೆಟ್ಟದ ಆಳಕ್ಕೆ ಇಳಿಯುತ್ತಿತ್ತು. ಇಬ್ಬರೂ ಜಗುಲಿ ಬಚ್ಚಲಿನಲ್ಲಿದ್ದ ಹಂಡೆಗೆ ತಂಬಿಗೆ ಹಾಕಿ ಕಾಲುತೊಳೆದೆವು. ಅಮ್ಮ ಮಧ್ಯಾಹ್ನದ ಅಡುಗೆ ಮುಗಿಸಿ ನಾವು ಬಂದಮೇಲೆ ಊಟ ಮಾಡಿದರಾಯಿತೆಂದು ಜಗುಲಿ ಗಂಬಕ್ಕಾತು ಕಾಯುತ್ತ ಕುಳಿತಿದ್ದವಳು ನಮ್ಮನ್ನು ಕಂಡು ಎದ್ದಳು. ಕಾಲು ತೊಳೆದದ್ದೇ ಅಪ್ಪಯ್ಯ – 'ಹೊತ್ತು ಮೀರಿದೆ ನನಗೇನೂ ಊಟ ಬೇಡ, ಕೃಷ್ಣನಿಗೆ ಹಾಕಿಬಿಡು, ಹಾಗೆಯೇ ನಿನ್ನದಾಗಿರದಿದ್ದರೆ ನೀನೂ ಮುಗಿಸಿಬಿಡು'– ಎಂದರು. ಅಮ್ಮ ಮೌನವಾಗಿ ಅಡುಗೆಮನೆಗೆ ನಡೆದು ಒಲೆಗೆ ಕಟ್ಟಿಗೆ ತುರುಕಿ, ಬೆಂಕಿಹೊತ್ತಿಸಿ ಗಿಳಲಿನಲ್ಲಿದ್ದ ಹಾಲನ್ನು ಕಾಯಿಸಲು ಇಟ್ಟಳು. ಅವಲಕ್ಕಿ ನೆನೆಸಿ ಕೆನೆಮೊಸರುಹಾಕಿ ಪಡಸಾಲೆಯಲ್ಲಿ ಕುಳಿತಿದ್ದ ಅಪ್ಪಯ್ಯನ ಮುಂದಿಟ್ಟಾಗ ಅಪ್ಪಯ್ಯ – 'ಯಾಕೋ ಜೀವಕ್ಕೆ ಏನೂ ಬೇಡವೆನಿಸುತ್ತೆ ಗೋದಾವರಿ. ಇಷ್ಟೊತ್ತಾದ ಮೇಲೆ ಹೇಗಿದ್ದರೂ ನೀನು ಊಟ ಮಾಡುವುದಿಲ್ಲ, ನನಗೆ ಗೊತ್ತು. ನೀನೇ ತೆಗೆದುಕೊಂಡುಬಿಡು' – ಎಂದು ಹೇಳಿದ್ದು ಅಡುಗೆಮನೆ ಯಲ್ಲಿ ಮಣೆಯಮೇಲೆ ಊಟಕ್ಕೆ ಕೂತ ನನಗೆ ಕೇಳಿಸಿತು. ಅಮ್ಮ, ಅಪ್ಪಯ್ಯ ಏನೂ ತಿನ್ನದೆ ತಾನು ಹೇಗೆ ತೆಗೆದುಕೊಳ್ಳುವುದೆಂದು ಮುಜುಗರದಲ್ಲಿ ಅವ ರೆದುರು ತುಂಬು ಸೆರಗುಹೊದ್ದು ನಿಂತಿರಬೇಕು. ಅಪ್ಪಯ್ಯ ಮತ್ತೊಮ್ಮೆ ಅಂದರು : 'ಹೋಗಲಿ ಇಲ್ಲಿ ತಾರೇ ಗೋದಾವರಿ, ಶಾಸ್ತ್ರಮಾಡಿಕೊಡು

ತ್ತೇನೆ' – ಅಮ್ಮ ಆಮೇಲೆ ಬೋಗುಣಿಯನ್ನು ಒಳಗೆ ತಂದು ದೇವರಕಟ್ಟೆ ಬಳಿ ಇಟ್ಟಳು. ನನಗೆ ಬಡಿಸಿದಳು. ನಾನು ಊಟ ಮಾಡುವುದನ್ನೇ ಮೊಳ ಕಾಲಿಗೆ ಗಲ್ಲವಿಟ್ಟು ನೋಡುತ್ತ ಕುಳಿತಳು. ಬೆಳಿಗ್ಗೆ ಮನೆ ಬಿಟ್ಟಾಗಿನಿಂದ ಏನೇನು ನಡೆಯಿತೆಂದು ವಿವರವಾಗಿ ತಿಳಿಯಲು ಆಕೆಗೆ ಕುತೂಹಲ. ಪಡಸಾಲೆ ಯಲ್ಲಿ ಅಪ್ಪಯ್ಯ ಕುಳಿತಿರುವುದರಿಂದ ಕೇಳಲು ಸಂಕೋಚ. ನಾನು ಊಟ ಮುಗಿಸಿ ಹೊರಗೆದ್ದು ಬಂದೆ. ಅಪ್ಪಯ್ಯ ಜಗುಲಿಗಂಬಕ್ಕೆ ಮಲಗಿದಂತೆ, ಅರ್ಧ ಕುಳಿತಂತೆ ಒರಗಿದ್ದವರು 'ನಾರಾಯಣಾ, ಭಾಗೀರಥಿ ಎಲ್ಲಿ ಹೋಗಿದ್ದಾರೋ'– ನನಗೆ ಕೇಳಿದ ಪ್ರಶ್ನೆಗೆ 'ಇವತ್ತು ಚೆನ್ನಕೇಶವನ ದೇವಸ್ಥಾನದಲ್ಲಿ ಉತ್ಸವ, ನೋಡುಕ್ಕೆ ಹೋಗಿದಾವೆ' ಅಡುಗೆ ಮನೆಯಿಂದ ಅಮ್ಮನ ಉತ್ತರ. 'ಅಪ್ಪಯ್ಯ ನಾನೂ ಹೋಗಲಾ ?' – ಎಂದು ನಾನು ಕೇಳಬೇಕು : ಅಪ್ಪಯ್ಯ ಒರಗಿದ್ದವರು ಎದ್ದು ಮೈಮೇಲಿನ ಬಟ್ಟೆ ಬಿಚ್ಚಿ, ಅಂಗವಸ್ತ್ರ ತಲೆಗೆಕಟ್ಟಿ ಮತ್ತೆ ಕಂಬಕ್ಕೆ ಒರಗಿ ಕಣ್‌ಮುಚ್ಚಿದರು. ಕಣ್ಣು ಮುಚ್ಚಿಯೇ 'ಕೃಷ್ಣಾ, ಗದುಗಿನ ಭಾರತ ತಗೊಂಡು ಬಾ' ಅಂದರು. ನಾನು ದೇವರಕಟ್ಟೆಯ ಕಟಾಂಜನದ ವ್ಯಾಸಪೀಠದಲ್ಲಿದ್ದ ಭಾರತ ತಂದು ಅವರೆದುರು ಕುಳಿತೆ. ಇಷ್ಟನೆ ಸರ್ಗ ಓದಿ ಹೇಳು ಎಂದರು. ನಾನು ವ್ಯಾಸಪೀಠಬಿಚ್ಚಿ, ಪುಸ್ತಕದ ಹಾಳೆ ತೆಗೆಯುವಾಗ ಅಮ್ಮಳಿಗೆ ಗೋದಾವರಿ ದೇವರ ಮುಂದೆ ಜೋಡಿದೀಪ ಹಚ್ಚಿಡು ಎಂದು, ನೀನು ಓದು ಕೃಷ್ಣಾ – ಅಂದರು. ಓದತೊಡಗಿದೆ. ಒಂದೆರಡು ಸರ್ಗಗಳು ಮುಗಿದಾದ ಮೇಲೆ ಕಣ್ಬಿಟ್ಟು ಸಾಕು ನಿಲ್ಲಿಸು ಎನ್ನುವಂತೆ ಕೈಸನ್ನೆಮಾಡಿದರು. ನಿಲ್ಲಿಸಿದೆ. ಮತ್ತೆ ಅಮ್ಮನ ಹೆಸರನ್ನು ಮೆಲುದನಿಯಲ್ಲಿ ಕರೆದರು. ಅಮ್ಮ ಸೆರಗು ಹೊದ್ದು ಅಡುಗೆ ಮನೆಯ ಹೊಸಿಲಬಳಿ ನಿಂತಳು. ಮಂಗಳಾರತಿ ಮಾಡು ಅಂದರು. ಮಂಗಳಾರತಿ ಮಾಡಿ ಅಮ್ಮ ತಂದು ಅವರೆದುರು ಹಿಡಿ ದಳು. ಅಪ್ಪಯ್ಯ ಎರಡು ಕೈ ಜೋಡಿಸಿ–ಮಂಗಳಾರತಿಯ ಮೇಲೆ ಹಾಯಿಸಿ ಮುಖಕ್ಕೆ ಒತ್ತಿಕೊಂಡು ಕಣ್ಮುಚ್ಚಿ ತೆರೆದರು. ಆಮೇಲೆ ನನ್ನತ್ತ – ಅಮ್ಮನತ್ತ ದಿಟ್ಟಿಸಿ ನೋಡಿದರು. ಅವರ ಮುಖ ಆರತಿಯ ಬೆಳಕಿನಲ್ಲಿ ಕಾಂತಿ ತುಂಬಿ ಕೊಂಡು ಹೊಳೆಯುತ್ತಿತ್ತು. ಅವರ ಕಣ್ಣಲ್ಲಿ ನಮಗರಿಯದ ಮಾತುಗಳು ತುಂಬಿದ್ದವು. ನನ್ನ ಎದೆಯೆಲ್ಲ ಕಲಸಿದ ಹಾಗಾಗಿ ಕಸಿವಿಸಿಯಾಗತೊಡಗಿತು. ಮಂಗಳಾರತಿಯ ದೀಪ ಗಾಳಿಗೆ ಅತ್ತಿತ್ತ ಅಲುಗುತ್ತಿತ್ತು. ಅಮ್ಮ ಹಾಗೇ

ಹಿಡಿದು ನಿಂತಿದ್ದಳು. ಅದನ್ನು ಕೆಳಗಿಡುವಂತೆ ಸನ್ನೆಮಾಡಿದ ಅಪ್ಪಯ್ಯ ಅಮ್ಮನನ್ನು ಕರೆದು ತಲೆಯಮೇಲೆ ಕೈಯಾಡಿಸಿದರು. ನನ್ನ ಮೈಯಿಡೀ ಸವರಿದರು. ಗಾಳಿಯ ರಭಸಕ್ಕೆ ಫಕ್ಕೆಂದು ಚಣಾರ್ಧದಲ್ಲಿ ಆರಿಹೋಗುವ ಹಲಗೆ ಆರತಿಯ ದೀಪದಂತೆ ಕಣ್ಮುಚ್ಚಿದರು. ಕಣ್ಮುಚ್ಚಿಯೇ 'ಕೃಷ್ಣಾ ಗೋದಾವರಿಯನ್ನು ಚೆನ್ನಾಗಿ ನೋಡಿಕೊಳ್ಳೊ. ಭಾಗೀರಥಿಯನ್ನು ದಡ ಮುಟ್ಟಿಸೋ, ನಾರಾಯಣ ಈ ಲೋಕಕ್ಕೆ ಹತ್ತುವವನಲ್ಲ ಅವನನ್ನೂ ನೀನು ಸಲಹಬೇಕು....' ಹೀಗೆ ಅರ್ಧರ್ಧ ಶಬ್ದಗಳನ್ನು ಉಚ್ಚರಿಸಿ ಕಂಬಕ್ಕೆ ಆತು ಕೂಡಲು ಹೋಗಿ ಜೋಲಿ ತಪ್ಪಿದರು. ನಾನು-ಅಮ್ಮ ದಿಗ್ಭ್ರಾಂತರಾಗಿ ಕೂತೆವು. ಅಮ್ಮ ಸೆರಗಿನ ಮುಟಿಗೆ ಬಾಯಿಗೊತ್ತಿ ಬಿಕ್ಕತೊಡಗಿದಳು. ನಾನು ಅಪ್ಪಯ್ಯನ ಮೈ ಅಲುಗಿಸಿ ನೋಡಿದೆ, ಗಲ್ಲ ಅಲುಗಿಸಿ ನೋಡಿದೆ. ಮುಚ್ಚಿದ ಕಣ್ಣವೆ ತೆರೆದುನೋಡಲು ನೋಡಿದೆ. ಅಪ್ಪಯ್ಯ ಎಂದು ಕರೆಯಲು ನೋಡಿದೆ. ಆದರೆ ಅವರು ನಿಶ್ಚಲರಾಗಿದ್ದರು. ಅಪ್ಪಯ್ಯ ಹೇಳಿದ್ದಂತೆ ಹೊರಳಾಡಿ ಜೋರಾಗಿ ಅತ್ತುಬಿಟ್ಟೆ. ನಮ್ಮ ಅಳುವನ್ನು ನಗುಮುಖದಿಂದ ನೋಡುವ ಹಾಗೆ ಅಪ್ಪಯ್ಯ ಸೂರ್ಯಾಸ್ತದ ಕೆಂಬಣ್ಣದಲ್ಲಿ ಜಗುಲಿಗೆ ಅರ್ಧ ಒರಗಿ; ಅರ್ಧ ಮಲಗಿ ತಮ್ಮ ಮುಖದಲ್ಲಿ ಕೊನೆಯ ನಗು ತುಂಬಿಕೊಂಡು ನಿಶ್ಚಲ ನಿಷ್ಟೆಯಲ್ಲಿದ್ದರು.

೦ ೦ ೦

ಅಪ್ಪಯ್ಯ ಏನೋ ಪಕ್ಕದಲ್ಲೇ ಇದ್ದ ನನಗೂ-ಅಮ್ಮನಿಗೂ ಸಹ ಹೆಜ್ಜೆ ಸಪ್ಪಳ ಕೇಳಿಸದ ಹಾಗೆ ನಡೆದು ಬಿಟ್ಟರು. ಅಮ್ಮ ಸ್ಮೃತಿ ಕಳೆದುಕೊಂಡಿದ್ದಳು. ಅಪ್ಪಯ್ಯ ನಂತರ ಮನೆಗೆ ನಾನೇ ಹಿರೀಕ. ಹಾಗೇ ಕೂಡುವ ಹಾಗಿರಲಿಲ್ಲ. ಅಮ್ಮನನ್ನು ಎತ್ತಿ ಒಳ ಕೋಣೆಗೆ ಒಯ್ದು ಮಲಗಿಸಿದೆ. ಅಪ್ಪಯ್ಯನ ದೇಹದ ಮೇಲೆ ಶಾಲು ತಂದು ಹೊದೆಸಿದೆ. ತುಸು ದೂರದಲ್ಲಿದ್ದ ಅಪ್ಪಯ್ಯನ ಅಣ್ಣ ತಿಮ್ಮಪ್ಪಯ್ಯನವರಿಗೆ, ಊರ ಜೋಯಿಸರಿಗೆ ಸುದ್ದಿ ಮುಟ್ಟಿಸಿದೆ. ಗುಡಿಯ ಉತ್ಸವದಲ್ಲಿ ಖುಷಿಯಲ್ಲಿ ಕೆನೆಯುತ್ತಿದ್ದ ನಾರಾಯಣ ಭಾಗೀರಥಿಯರನ್ನು ಕರೆತಂದೆ. ಅಪರಕಾರ್ಯ, ತಿಥಿಗಳನ್ನೆಲ್ಲ ಸ್ವಲ್ಪವೂ

ಧೈರ್ಯ ಕಳೆದುಕೊಳ್ಳದೆ ನೇರವೇರಿಸಿದ್ದು ಹೇಗೆ ? ಅಷ್ಟು ನಿರ್ಲಿಪ್ತ–ಧೃತಿ ಗೆಡದ ಚಿತ್ತ ನನಗ್ಹೇಗೆ ಒದಗಿ ಬಂತೋ ಗೊತ್ತಾಗುವುದಿಲ್ಲ. ದೊಡ್ಡಪ್ಪ ತಿಮ್ಮಪ್ಪಯ್ಯ ಇಂಥ ಅವರಗಳಿಗೆಯಲ್ಲೂ ಮಂತ್ರಾಕ್ಷತೆಯಂತೆ ಕೆಟ್ಟ ಮಾತು ಉದುರಿಸಿದರು. ದೂರದ ಸಂಬಂಧಿಗಳು–ಉರವಣೆಗೆಗೆ ತಕ್ಕ ಶಾಸ್ತಿಯಾ ಯಿತು ತಗಿ ಎಂದರು. ಸುತ್ತಲೆಲ್ಲ ಕೆಡುಕು ತುಂಬಿದ ಆ ಕಲುಷಿತ ವಾತಾವ ರಣದಲ್ಲಿ ನಮಗೆ ನಾವೇ ಆಸರೆಯಾಗಿದ್ದೆವು.

ಇದ್ದ ತುಸು ಜಮೀನು : ಪಾರಂಪಾರಿಕವಾಗಿ ಬಂದ ಕಸುಬನ್ನ ಕಸಿದು ಕೊಳ್ಳಲು ದೊಡ್ಡಪ್ಪ ನಾನಾ ಹುನ್ನಾರು ನಡೆಸಿದರು. ಆದರೆ ಸುತ್ತ ಹತ್ತೂ ರಿನ ಒಕ್ಕಲಿಗರಿಗೆ, ಎಲ್ಲ ಜಾತಿಯ ಜನರಿಗೆ ಅಪ್ಪಯ್ಯನ ಹಿರಿಮೆ ಗೊತ್ತು. ಅವರು ನಮ್ಮ ಕೈ ಬಿಡಲಿಲ್ಲ. ಅಷ್ಟೇಕೆ ದೊಡ್ಡಪ್ಪ ನಮ್ಮ ಮನೆಯಲ್ಲಿನ ಪಾಣಿ ಪುಸ್ತಕ, ಶಾನುಭೋಗಿಕೆಯ, ತಾಲ್ಲೂಕು ಕೋರ್ಟಿನ ಲೆಕ್ಕ ಪತ್ರಗಳ ನ್ನೆಲ್ಲ ಜಬರುದಸ್ತಿಯಲ್ಲಿ ತೆಗೆದುಕೊಳ್ಳಲು ನೋಡಿದಾಗ ನಮಗೆ ಒತ್ತಾಸೆ ಯಾಗಿ ನಿಂತವರು ಸಂಪಿಗೆ ಹಳ್ಳಿಯ ಹಾಲಕ್ಕಿ ಒಕ್ಕಲಿಗ ಗೌಡರು. ಕಡೆಗೂ ಅಪ್ಪಯ್ಯನ ಋಣ ಅವರು ಯಾವ ರೀತಿಯಲ್ಲಿ ತೀರಿಸಬೇಕಾಯ್ತು !

ಅಪ್ಪಯ್ಯನಿಗಿದ್ದ ಮೂರು ಮಕ್ಕಳಲ್ಲಿ ತುಸುಹಿರಿಯನೆಂದರೆ ಆಗ ತಾನೇ ಚಿಗುರೊಡೆಯುತ್ತಿದ್ದ ಚಿಗುರು ಮೀಸೆಯ ನಾನೇ. ಆಮೇಲೆ ನನಗೆ ಐದಾರು ವರ್ಷದ ಅಂತರದಲ್ಲಿ ಹುಟ್ಟಿದ ನಾರಾಯಣ. ಆಮೇಲೆ ಅವನಿಗೆ ನಾಕಾರು ವರ್ಷದ ಅಂತರದಲ್ಲಿ ಭಾಗೀರಥಿ. ಅಪ್ಪಯ್ಯ ಹೊರಟು ಹೋದಾಗ ನನಗೆ ಹದಿನೆಂಟೋ ಏನೋ. ನಾರಾಯಣ ಮಿಡ್ಲಸ್ಕೂಲಿನಲ್ಲಿದ್ದರೆ, ಭಾಗೀರಥಿ ಪ್ರೈಮರಿ ಓದುತ್ತಿದ್ದಳು. ಇವರನ್ನೆಲ್ಲ ನೋಡಿಕೊಳ್ಳುವ ಜವಾಬುದಾರಿ ನನ್ನ ಮೇಲಿತ್ತು. ಅಮ್ಮ ಅಡುಗೆ ಮನೆಯ ಒಲೆಯ ಮುಂದೆ ಕೂತು ಅಚ್ಚು ಕಟ್ಟಾದ ಅಡುಗೆ ಮಾಡುವುದನ್ನ ಬಲ್ಲ ಸರಳ ಹೆಂಗಸೇ ಹೊರತು ಪ್ರಪಂಚ ವರಿತ ಚಾಣಾಕ್ಷೆಯಲ್ಲ. ಯಾರಾದರೂ ಒಳ್ಳೆಯದನ್ನು ಹೇಳಿದರೆ ಹೂಂ ಎಂದು ತಲೆ ಹಾಕುವವಳು. ಕೆಟ್ಟದ್ದನ್ನಾಡಿದರೆ ಹೇಳಿದವರೆದುರೇ ಅತ್ತು ನಿರಾಳವಾಗಿ ಬಿಡುವವಳು. ಅಂತಹ ಸೀದಾ ಸಾದಾ ಮನಸ್ಸಿನ ಅಮ್ಮಳನ್ನು ಚಿಕ್ಕ ನಾರಾಯಣ, ಪುಟ್ಟ ಭಾಗೀರಥಿಯರನ್ನು ಒಳಿತು–ಕೆಡಕುಗಳಿಂದ ಚ್ಯುತಿ ಬಾರದಂತೆ, ಯಾರಿಗೂ ನೋವಾಗದಂತೆ ನೋಡಿಕೊಳ್ಳಬೇಕಿತ್ತು. ದಾಯಾದಿ

ಗಳ ಮೂಕ ಪೆಟ್ಟಿಗೆ ಹೆದರದೆ ; ಸೋತರೂ ಅದನ್ನು ತೋರಿಸಿಕೊಳ್ಳದೆ ಘನತೆಯಿಂದ ನೋಡಿಕೊಳ್ಳಬೇಕಿತ್ತು.

ಕೊಟ್ಟ ಮಾತನ್ನು ಉಳಿಸಿಕೊಳ್ಳಲು, ಅಪ್ಪಯ್ಯನ ಆಸೆಯಂತೆ ಬದುಕಲು ಏನೆಲ್ಲ ಕಷ್ಟಪಟ್ಟೆ. ಹಗಲು–ರಾತ್ರಿ ಮರೆತು ಊರೂರು ತಿರುಗಿ ಹಳೆಯ ಸಂಬಂಧಗಳನ್ನೆಲ್ಲ ಮತ್ತೆ ರೂಢಿಸಿಕೊಂಡೆ. ಅಪ್ಪಯ್ಯನ ಕಪಾಟಿನಲ್ಲಿದ್ದ ಪುಸ್ತಕಗಳನ್ನೆಲ್ಲ ಒಂದೂ ಬಿಡದ ಹಾಗೆ ಓದಲು ಯತ್ನಿಸಿದೆ. ಆಗೀಗ ತಾಲ್ಲೂಕಿಗೆ ಹೋಗಿ ಅಷ್ಟಿಷ್ಟು ಇಂಗ್ಲೀಷು ; ಕಾನೂನಿನ ವಿಷಯಗಳನ್ನು ಅರಿತುಕೊಂಡು ಸುತ್ತೂರಿನ ಜನತೆಯ ವಿಶ್ವಾಸ, ನಂಬಿಕೆ ಹಾಗೇ ಕಾಯ್ದುಕೊಳ್ಳಲು ನೋಡಿದೆ. ಶಾನುಭೋಗಿಕೆಯಿಂದ ಉಳಿದ ಸಮಯವನ್ನು ಇದ್ದ ನಾಲ್ಕೆಕರೆ ಜಮೀನನ್ನು ಹದ ಮಾಡಿ ಬೆಳೆ ತೆಗೆಯುವಲ್ಲಿ ; ನಾರಾಯಣ–ಭಾಗೀರಥಿಯರ ಓದಿನತ್ತ ಲಕ್ಷ್ಯ ಹರಿಸುವಲ್ಲಿ ಕಳೆದೆ. ಮನೆಯ ಹಿತ್ತಲು–ಮುಂದಿನ ಅಂಗಳದಲ್ಲಿ ತರಕಾರಿ ಬೆಳೆದೆ. ಸಂಪಿಗೆ ಹಳ್ಳಿಯ ಹಾಲಕ್ಕಿಗೌಡರ ಬಳಿ ಒಂದೆರಡು ದನ, ಹಾಲು ಕೊಡುವ ಎಮ್ಮೆಗಳನ್ನು ತಂದುಕಟ್ಟಿ, ಹಯನವನ್ನು : ಕಮತವನ್ನು ಒಟ್ಟೊಟ್ಟಿಗೆ ನಡೆಸಿದೆ. ಜಮೀನಿನಲ್ಲಿ ವರ್ಷಕ್ಕೆ ಮೂರು ಬೆಳೆ ತೆಗೆದು ಊರಲ್ಲಿನ ಜನರಿಗೆ ಕಣ್ಣು ಮೇಲೆ ಮಾಡಿಸಿದೆ.

ನಾರಾಯಣನನ್ನು ದಡಕ್ಕೆ ಮುಟ್ಟಿಸಲು ಪ್ರಯತ್ನ ಪಟ್ಟೆ. ಭಾಗೀರಥಿಗೆ ಹತ್ತು ಕಡೆ ಹುಡುಕಿ ಒಳ್ಳೆಯ ಮನೆ ಸೇರಿಸಿದೆ....

ಆದರೆ ಅದೆಲ್ಲ ಈಗೇಕೆ ನಿನ್ನೆ ನಡೆದ ಹಾಗೆ ಸ್ಪಷ್ಟವಾಗಿ ಕಣ್ಣ ಮುಂದೆ ಬಂದು ನಿಲ್ಲುತ್ತದೋ ? ಅಪ್ಪಯ್ಯ ಮಧ್ಯಾಹ್ನದ ಊಟದ ನಂತರ ಜಗುಲಿಗೊರಗಿ ; ದನದ ಕೊಟ್ಟಿಗೆಯಲ್ಲಿ ದನದ ಕೊರಳು ತೀಡುತ್ತ, ಮಂದ ಖಂದೀಲಿನ ಬೆಳಕಿನಲ್ಲಿ ಪಾಣಿಪುಸ್ತಕ ಬರೆಯುತ್ತ ಕಾಡು ದಾರಿಯಲ್ಲಿ ನಡೆದಾಡುತ್ತ ಹೇಳಿದ ಮಾತುಗಳು ಈಗ್ಯಾಕೆ ನೆನಪಾಗುತ್ತಿವೆಯೋ ? ಅಪ್ಪಯ್ಯ ಎದುರು ಕುಳಿತು ಈಗ ತಾನೇ ಅಷ್ಟೆಲ್ಲ ಹೇಳಿ ಮುಗಿಸಿ, ಸಪ್ಪಳವಾಗದಂತೆ ಎದ್ದು ಬಾಯಲ್ಲಿನ ಕವಳದ ರಸವನ್ನು ಉಗಿಯಲು ಹೋಗಿದ್ದಾರೆ, ಇನ್ನೇನು ಇದೀಗ ಬಂದು ಬಿಡುತ್ತಾರೆ ಎಂದೆನಿಸುತ್ತದೆ, ಯಾಕೆ ?

ಮೈಯಲ್ಲಿನ ಕಸುವು ಕರಗಿ, ಹಳೆಯ ನೆನಪಿನ ಗಂಟನ್ನು ಬಿಚ್ಚಿ ಎಂಬತ್ತರ ಸರಹದ್ದು ದಾಟಿ ಮುಟ್ಟಿ ಮುಟ್ಟಿ ನೋಡಿಕೊಳ್ಳುತ್ತಿರುವ ನನಗೆ

ವಿಭ್ರಾಂತಿಯೆ ? ಅಥವಾ ವಯಸ್ಸಾಗಿ ಕೊನೆಗಳಿಗೆ ಎಣಿಸುವಾಗ ; ತಲ ತಲಾಂತರದಿಂದ ಬಂದ ಮನೆಯ ಜಗುಲಿ ಕಟ್ಟೆಗೆ ನಿಂತು ಕೊನೆಯ ಮೆಟ್ಟಿಲಿಳಿದು ನಮಗರಿವಿರದ, ಅದರ ವಾಸನೆ, ಬಣ್ಣ ಏನೊಂದು ಗೊತ್ತಿರದ ಊರಿನ ಅಗಸೆ ಬಾಗಿಲು ತಟ್ಟುವ ದಿನ ಹತ್ತಿರವಾದಂತೆ–ಆಚೆ ಲೋಕ ಸೇರಿ ತಲವಾಗಿಲು ಮುಚ್ಚಿದ ಮೇಲೆ ಲೌಕಿಕವೆಲ್ಲ ಮರೆತು ಅಲ್ಲಿನ ಕತ್ತಲಿನಲ್ಲಿ ಕರಗಿ ಹೋಗುವ ಅವ್ಯಕ್ತ ಭಯ ಬೆನ್ನ ಹಿಂದೆ ಬಿದ್ದು ಹೀಗೆ ಮಾಡಿಸುತ್ತದೋ ?

'ಸಾಯುವುದಕ್ಕೆ ಯಾವತ್ತೂ ಹೆದರಬಾರದು ನೋಡು, ಕೃಷ್ಣಾ. ಆದರೆ ಸಾವಲ್ಲೂ ಘನತೆ ಇರಬೇಕು ಆ ರೀತಿ ಬಾಳಿ ಬದುಕಿ ಸಾಯಬೇಕು, ಅಷ್ಟೇ. ಸತ್ತ ಮೇಲಂತೂ ನಾನಿರುಲ್ಲ ಅನ್ನೋ ಧಾಷ್ಟ್ರ್ಯದಲ್ಲಿ ಅಂಧಾದುಂದಿಯಾಗಿ ಮನಸೋ ಇಚ್ಛೆ ಬಾಳಬಾರದು. ನಮ್ಮ ಬಾಳು ಬೇರೆಯವರಿಗೆ ದಾರಿದೀಪವಾಗಬೇಕು. ಪ್ರೀತಿ ತುಂಬಿಸಬೇಕು. ಇಂಥವನು, ಹೀಗೆ, ಇಂತಹ ಬಾಳು ಸವೆಸಿ ಸತ್ತ ಪುಣ್ಯಾತ್ಮ ಅಂತನ್ನಬೇಕು—ಕಂಡವರು.... '

ಅಪ್ಪಯ್ಯ ಹೇಳಿದ್ದರು : ಹೋಬಳಿಯಲ್ಲಿದ್ದ ನಮ್ಮ ಸಂಬಂಧಿಕನೊಬ್ಬ ಸರ್ಕಾರಿ ಹಣ ನುಂಗಿ ಕೋರ್ಟಿನಿಂದ ದಾವೆ ಬಂದಾಗ ಎದೆಯೊಡೆದು ಬಾವಿಗೆ ಹಾರಿ ಪ್ರಾಣ ಕಳೆದುಕೊಂಡಾಗ. ನಾನು–ಅಪ್ಪಯ್ಯ ಸಂಬಂಧಿಯ ದಹನ ಕಾರ್ಯಕ್ಕೆಂದು ಅಲ್ಲಿಗೆ ಹೋದೆವು. ಅಪ್ಪಯ್ಯ ಅಲ್ಲಿಯವರೆಗೆ ಸಂಬಂಧಿ ಸಾಧಿಸಿದ ಹಗೆ ಮರೆತು ಎಲ್ಲ ಕಾರ್ಯವನ್ನೂ ತಾವೇ ಮುಂದು ನಿಂತು ಮಾಡಿಸಿದರು. ಇರಲಿ ಎಂದು ಅಷ್ಟು ಹಣವನ್ನು ಆತನ ಹೆಂಡತಿ ಮಕ್ಕಳ ಕೈಯಲ್ಲಿಟ್ಟು ಬಂದರು.

ಅಂಥ ಅಪ್ಪಯ್ಯನ ಮಗನಾದ ನಾನು ಬದುಕುವುದರ ಕುರಿತು ಯೋಚಿಸಬೇಕು. ಅದು ಬಿಟ್ಟು ಸಾವಿನ ಕಪ್ಪು ಛಾಯೆ ತನ್ನನ್ನು ಕರೆದಂತಾಗುತ್ತಿದೆ ಎಂದು ಯಾಕೆ ಹೆದರುತ್ತಿದ್ದೇನೆ.

o o o

ವಾರದಿಂದಲೂ ಆಕಾಶದ ತುಂಬ ಕಪ್ಪು ಮೋಡಗಳು ಬಿಗಿದು ಕೂತಿವೆ. ಕಾಯಿರಿ, ಇನ್ನೊಂದು ಚಣ, ಕಾಯಿರಿ ಇನ್ನೊಂದು ದಿನ–ಅನ್ನುತ್ತಲೇ ಇವೆ

ಯಾದರೂ ಮೋಡ ಕರಗಿ ಮಳೆ ಸುರಿಯುತ್ತಿಲ್ಲ. ಒಂದೇ ಒಂದು ಹನಿಯು ನೆಲದಾಳಕ್ಕಿಳಿದು ಮಣ್ಣರಳಿ ವಾಸನೆ ಚೆಲ್ಲುತ್ತಿಲ್ಲ. ಊರ ಬೀದಿಗಳು ಧೂಳಿನಿಂದ ತುಂಬಿಕೊಂಡಿವೆ. ಗಾಳಿ ಬೀಸಿದರೆ ಬೊಗಸೆ ಧೂಳ ಕಣ ಬಾಯಿ ಸೇರುತ್ತದೆ–ಕಣ್ಣು ತುಂಬುತ್ತದೆ. ಊರ ಬೀದಿಗೆ, ಮನೆಯಂಗಳಕ್ಕೆ ನೀರಕೋಡಿ ಹರಿದು, ಒಕ್ಕಲಿಗರ ಖುಷಿಯ ಕೂಗು ಕೇಳಿ ಬಂದು ಸರಸರನೆ ಕಣ್ಣೀರು ಹರಿದುಹೋಗಿ ಧೂಳನ್ನು ಕೊಚ್ಚಿ ಒಯ್ಯಲಿಲ್ಲ. ಅದು ಹೋಗಲಿ ಈ ಒಣ ಮೋಡಗಳನ್ನು ಕರಗಿಸಿ – ಮೋಡದಲ್ಲಡಗಿದ ಚೂರುಪಾರು ನೀರನ್ನು ಹೀರಿ ಬಿಸಿಲಿನ ಕೋಲಾದರೂ ಝಳಪಿಸುತ್ತಿಲ್ಲ. ಎದೆಯ ಬಿಕ್ಕುಗಳೆಲ್ಲ ಕಣ್ಣೀರಾಗಿ ಹೊರಬರದೆ, ಮಾತಾಗದೆ ಬರೀ ಎದೆಹಿಂಡುವ ನೋವಾಗಿ, ಸಾವಿರದ ಸಾವಾಗಿ, ಎಲ್ಲೋ ಆಳದಲ್ಲಿ ಸಿಕ್ಕುಹಾಕಿಕೊಂಡು – ಅಲ್ಲೇ ಕರಗಿ ಎದೆ ಹಿಂಡುವ, ಹೊಟ್ಟೆ ಕಿವುಚಿ ಗಂಟಲುನರಗಳನ್ನು ನೋವಲ್ಲಿ ನೀಲಿಮಾಡುವ ಸಂಕಟ–ತಳಮಳ ಹೆಚ್ಚಿಸುವ, ಬೆಳೆಯುವ ಹಾಗಾಗುತ್ತದೆ. ಕೂತರೆ ಕುಸಿದು ಹೋಗುತ್ತೇನೇನೋ ಅನ್ನುವ ಅನಿಸಿಕೆ. ನಿಂತರೆ ಕಾಲೆತ್ತಿಇಡದಷ್ಟು ಜೀವ ಒಜ್ಜೆ ಅನಿಸುತ್ತದೆ. ಮಲಗಿದರೆ ಸತ್ತುಹೋಗುತ್ತೇನೆಂಬ ಭಾವನೆ....

ಎಲ್ಲ ಎಂಥ ವಿಚಿತ್ರ ?

ಯಾರ ನಿರೀಕ್ಷೆ ನನಗಿರಲಿಲ್ಲವೋ ಅವರೆಲ್ಲ ಬಂದರು – ಮಳೆ ನೆಮ್ಮದಿ ತರದ ಹುಸಿಮೋಡದಂತೆ. ಯಾರನ್ನು ಕಾಯುತ್ತ ಜೀವ ತಹಿಸುತ್ತಿದೆಯೋ ಅವರಿನ್ನೂ ಬರುತ್ತಿಲ್ಲ – ಮಳೆಯ ಹಾಗೆ.

ಕಾಯುವುದು ಕಷ್ಟ ; ಅನಿವಾರ್ಯ ಮಾತ್ರವಲ್ಲ ವ್ಯರ್ಥ ಕೂಡ ಎಂದೆನಿಸುತ್ತಿದೆ ನಿನ್ನೆಯಿಂದ. ಫಲಿಸಲು ದೀರ್ಘ ಕಾಲಾವಕಾಶ ಕೇಳುವ ನಿಟ್ಟುಸಿರು ಹೊರಬರುತ್ತದೆ. ಆದರೆ ಈ ವಯಸ್ಸಾದ ಬೆನ್ನುಬಾಗಿದ ಮುದುಕನಿಗೆ ಕಾಯುವ ತಾಳ್ಮೆ ಇಲ್ಲದೆ ತಾನು ಕಟ್ಟಿಬೆಳೆಸಿದ ಮನೆ–ತೋಟ ಎಲ್ಲ ನಿರರ್ಥಕ ಅನಿಸುತ್ತದೆ. ಕಾಲ ಚಲಿಸುವುದು ಬೇಡ, ತೆವಳುತ್ತಲೂ ಇಲ್ಲ. ಸುದುಲಲ್ಲಿ ಸಿಕ್ಕಿ ಅದು ಮತ್ತೆಂದೂ ಅಣುವಿನಷ್ಟು ಕೂಡ ಚಲಿಸಲಾರದೇನೋ.... ಯಾಕೆ ಈ ಭಾವ ?

ಕಾಯುವುದು ಎಂತಹ ಯಾತನೆಯ ಕೆಲಸ.

ಎಲ್ಲರೂ ಉಂಡುಟ್ಟು ಮನೆತನಕ್ಕೆ ಕೀರ್ತಿತರಲಿ ; ದೀಪ ಬೆಳಗಿಸಿ

ನೂರುಕಾಲ ಬದುಕಲಿ ಎಂದು ಹನಿರಕ್ತ, ಹನಿಬೆವರು ಬೆರೆಸಿ ತೋಟಮಾಡಿದೆ. ಚಿಕ್ಕ ಮನೆಯನ್ನು ದೊಡ್ಡಮನೆ ಮಾಡಿದೆ. ಆದರೆ ಇಲ್ಲಿ ಕ್ರಿಯೆ ಹಿಡಿಯುವವರಾರು ? ಕರುಳಬಳ್ಳಿಯ ಕಕ್ಕುಲತೆ ಯಾರಿಗಿದೆ ? ತುಂಡುಭೂಮಿ ಜೋಡಿಸಿ ವಿಶಾಲ ಮಾಡಿದ ನೆಲವನ್ನು ಮತ್ತೆ ತುಂಡು ಮಾಡಲು ನಿಂತಿದ್ದಾರೆ. ಅಲ್ಲಿ ತಮ್ಮ ಸ್ವಾರ್ಥದ ಬೀಜ ತೂರಲು ಬಂದಿದ್ದಾರೆ. ಹಿಂದೆಲ್ಲ ಕಡೆ ಆದ ಹಾಗೆ ಇಲ್ಲಿಯೂ ದೊಡ್ಡ ಮನೆಯ ತುಂಬ ಅಡ್ಡಡ್ಡ ಗೋಡೆಗಳು ಕಟ್ಟಿ ಗಾಳಿ–ಬೆಳಕು ಬರದಂತೆ ತಡೆಹಿಡಿದು ಬಿಡುತ್ತಾರೆ. ಇಷ್ಟಕ್ಕೆ ಯಾಕೆ ನಾನು ಸೋತು ಮಣ್ಣಾಗಬೇಕಿತ್ತು. ಸುಟ್ಟ ಸುಣ್ಣವಾಗಬೇಕಿತ್ತು. ನನ್ನ ಆತಂಕವನ್ನು ತುಸುವಾದರೂ ಕಡಿಮೆ ಮಾಡುವವರಾದರೂ ಬರಬಾರದೇ ?

'ಮಗು'

ಮರುಚಣ ಮನಸ್ಸಿಗೆ ಪಿಚ್ಚೆನಿಸಿ, ಛೇ ಅನಿಸಿ....

o o o

ಕೃಷ್ಣಸ್ವಾಮಿ ಮತ್ತೊಮ್ಮೆ ಕೂತಭಂಗಿ ಬದಲಿಸಿದರು. ನಿಧಾನಕ್ಕೆ ಜಗುಲಿ ಗಂಬಕ್ಕಾತು ಕಾಲನ್ನು ನಿಡಿದಾಗಿ ಚಾಚಿದರು. ಹಿತ್ತಲಿನ ಗೋದಲೆಯಲ್ಲಿ ಕಳೆದ ವಾರ ಹುಟ್ಟಿದ ಫಲ್ಗುಣಿ ಕರು ಅಂಬಾ ಎಂದಿತು. ಅದರ ತಾಯಿ ಕಾಡಿನಿಂದ ಬರುವ ಸಮಯ. ಇದಕ್ಕೆ ಹೇಗೆ ಗೊತ್ತಾಗುತ್ತದೋ, ಅದನ್ನೇ ಕರುಳ ಸಂಬಂಧವೆನ್ನುವುದು. ಇದೇ ಜಾಗದಲ್ಲಿ ಕೂಡುತ್ತಿದ್ದ ಅಪ್ಪಯ್ಯ ಈಗಿದ್ದಿದ್ದರೆ 'ಕೃಷ್ಣಾ ಹೋಗಿ ಅದರ ಕೊರಳು ತೀಡೋ. ನನ್ನವರಿದ್ದಾರೆಂಬ ಭಾವನೆ ಅದಕ್ಕೆ ಬರುತ್ತೆ. ಸ್ವಲ್ಪವಾದರೂ ನೆಮ್ಮದಿ ಸಿಕ್ಕುತ್ತೆ. ಪಾಪ ಬಾಯಿ ಇಲ್ಲದ ಪ್ರಾಣಿ ನೋಡು, ಅದಕ್ಕೆ' – ಎನ್ನುತ್ತಿದ್ದರು. ಈಗ್ಯಾರಿಗೆ ಹೇಳುವುದು. ಅಂಥ ಸೂಕ್ಷ್ಮತೆ ಯಾರಲ್ಲಿ ಉಳಿದಿದೆ. ಪರರ ನೆಮ್ಮದಿ ಅವರಿಗೇಕೆ ಬೇಕು ? ಬಾಯಿಲ್ಲದ ಪ್ರಾಣಿಯದು ಒತ್ತಟ್ಟಿಗಿರಲಿ ಬಾಯಿದ್ದೂ ಏನನ್ನೂ ಹೇಳದಂತಹ ಸ್ಥಿತಿ ಒದಗಿರುತ್ತದಲ್ಲ ಅದನ್ನೇನೆನ್ನುವುದು....

ಸಂಜೆಯಿಂದಲೂ ಮನೆಯೊಳಗೆ ಬಾರದೆ ಕಟ್ಟೆಗೆ ಕೂತ ಗಂಡನನ್ನು ಸುಭದ್ರಮ್ಮ ಹೊಸ್ತಿಲಲ್ಲಿ ನಿಂತು ಗಮನಿಸಿದರು. ನೀಲಾಂಜನ ಹಚ್ಚಿ ತಲಬಾಗಿಲಿನ ಗೂಡಿನಲ್ಲಿಟ್ಟು ಮತ್ತೊಮ್ಮೆ ಗಂಡನನ್ನು ಕಂಡು, ಹೊಟ್ಟೆಯಲ್ಲಿ

ಹಾಲು ಸುರಿದು ಕೊಂಡಹಾಗಾಗಿ, ಅಡುಗೆ ಮನೆ ಸೇರಿ ಸೆರಗಿನಿಂದ ಒದ್ದೆಗಲ್ಲ ಗಳನ್ನು ಒರೆಸಿಕೊಂಡರು. ತನ್ನ ಗಂಡ ಯಾವತ್ತೂ ಇಷ್ಟೊಂದು ಅನ್ಯಮನಸ್ಕ ರಾಗಿರಲಿಲ್ಲ. ಅವರ ಮನಸ್ಸಿಗೀಗ ತುಂಬ ಘಾಸಿಯಾಗಿದೆ-ಯಾರೂ ಸಮಾಧಾನ ಪಡಿಸದಷ್ಟು.... ತಾನೋ ಮನೆಯಲ್ಲಿ ಒಂಟಿ ಹೆಣ್ಣು. ಇವ್ರನ್ನಾದಿಯಾಗಿ ಯಾರು ತಾನೇ ತನ್ನಮಾತು ಕೇಳಿಯಾರು? ಅತ್ತೆ ಇದ್ದಿದ್ದರೆ ಅವರಾದರೂ.... ಸುಭದ್ರಮ್ಮನ ಯೋಚನೆಗಳು.

ಕೃಷ್ಣಸ್ವಾಮಿ ಮತ್ತೆ ಕುಳಿತಭಂಗಿ ಬದಲಿಸಿದರು. ಅಪ್ರಯತ್ನಪೂರ್ವಕ ವಾಗಿ 'ಮಗು' ಎಂದು ಮತ್ತೊಮ್ಮೆ ಕರೆದುಕೊಂಡರು. ಮನಸ್ಸಿಗೆ ಶಾಂತಿ ಸಿಗಲು ಜಪಮಾಲೆ ತೆಗೆದು-ಕೈಯಲ್ಲಿ ಹಿಡಿದರೆ ಬಾಯಲ್ಲಿ 'ನಾರಾಯಣ ನಾರಾಯಣ' ಎಂಬ ಶಬ್ದ ಹೊರಬಂತು, ಎಂತಹ ವಿಚಿತ್ರ ! ?

ತಟ್ಟನೆ ತಮ್ಮ ಸೋದರ ನಾರಾಯಣನ ನೆನಪು ಬಂತು : ಇತ್ತ ಸಂಸಾ ರಸ್ಥನೂ ಆಗದೇ ; ಸಂತನೂ ಆಗದೆ ; ಕಡೆಗೆ ಸಭ್ಯನೂ ಆಗದೇ.... ಕೊನೆಯ ದಿನಗಳನ್ನು ವಿಕ್ಷಿಪ್ತನಾಗಿ, ತಪ್ತನಾಗಿ ಕಳೆದ ನಾರಾಯಣ! 

# ನಾರಾಯಣ ನಮೋಸ್ತುಭ್ಯಂ !

---

ಅವ ಹುಚ್ಚು ಹುಡುಗ. ತನಗೆ ಬೇಕಿರುವುದು ಏನೆಂಬುದು ಕಡೆಗಳಿಗೆವರೆಗೂ ಅವನಿಗೆ ತಿಳಿಯದೇ ಹೋಯಿತು. ಅದಕ್ಕೆ ಏನೋ ಅಪ್ಪಯ್ಯ ಇವನ ಜನ್ಮ ಜಾತಕ ತೀದವರಂತೆ ನಾರಾಯಣ ಈ ಲೋಕಕ್ಕೆ ಹತ್ತುವವನಲ್ಲ. ಚಂಚಲ ಮನಸ್ಸದು. ಜಂಗಮನಂತೆ ಸುತ್ತುತ್ತೆ. ಅದನ್ನ ಒಂದು ಕಡೆ ಹಿಡಿದು ನಿಲ್ಲಿಸಿ ಅವನನ್ನು ದಡಮುಟ್ಟಿಸೋ ಕೃಷ್ಣಾ ಅಂದಿದ್ದರು. ನಾನೂ ಅಪ್ಪಯ್ಯನ ಮಾತನ್ನು ಅಕ್ಷರಶಃ ಪಾಲಿಸಿದೆ.

ನಾರಾಯಣ ತಾಲೂಕಿನಲ್ಲಿ ಇಂಟರ್‌ಮಿಡಿಯೆಟ್ ಮುಗಿಸಿ ಇನ್ನೂ ಕಲಿಯುತ್ತೇನೆ ಅಂದ. ಆ ವೇಳೆಗೆ ಮನೆಯ ಗತಿಸ್ಥಿತಿ ತುಂಬ ಸುಧಾರಿಸಿತ್ತು. ಮನೆಯ ತೋಟದ ತರಕಾರಿ, ಹಾಲುಹಯನು, ನಂಬಿಗಸ್ತ ಒಕ್ಕಲಿಗರು ತಂದುಕೊಡುವ ಅಕ್ಕಡಿಕಾಳು ಕಡ್ಡಿ ಇದೆಲ್ಲದರಿಂದ ಮನೆ ಹೇಗೋ ಸಾಗಿ ಹೋಗಿ ಬಿಡುತ್ತಿತ್ತು. ಜಮೀನಿನಲ್ಲಿ ನಾಕು ಆಳುಗಳನ್ನು ಗೊತ್ತು ಮಾಡಿ ಚಿಕ್ಕ ಕೈಬಾವಿಯೊಂದನ್ನು ನಾನೇ ನಿಂತು ತೋಡಿಸಿದ್ದೆ. ಒಂದು ಮಗ್ಗುಲಿಗೆ ಪಾತಿ ಕಟ್ಟಿ ಇನ್ನೂರರಷ್ಟು ತೆಂಗು ನೆಟ್ಟು ಅವನ್ನು ಕಣ್ಣನಂತೆ ನೋಡಿಕೊಳ್ಳುತ್ತಿದ್ದೆ. ಏಳಿಗೆಯ ಈ ಗಳಿಗೆಯಲ್ಲಿ ಹುಡುಗ ಕೇಳುತ್ತಾನೆಂದರೆ, ಬೆಳೆದು ದೊಡ್ಡವನಾಗುತ್ತೇನೆಂದರೆ ಯಾಕೆ ಬೇಡ ಎನ್ನಬೇಕೆಂದು ಟ್ರಂಕಿನಲ್ಲಿ ಅವನ ಸಾಮಾನುಗಳನ್ನೆಲ್ಲ ನಾನೇ ಖುದ್ದಾಗಿ ನಿಂತು ಜೋಡಿಸಿ ಅವನನ್ನು ಮೈಸೂರಿಗೆ ಕೊಂಡೊಯ್ದು ಬಿಟ್ಟೆ. ನಮ್ಮ ಪರಿಚಯದವರ ಮನೆಯಲ್ಲಿ ನಾರಾಯಣನ ವಾಸ್ತವ್ಯ ಏರ್ಪಾಡು ಮಾಡಿ ಅವನಿಗೇನು ಕುಂದೆನಿಸದಂತೆ ನೋಡಿಕೊಂಡೆ. ಆದರೆ ಮೈಸೂರಿಗೆ ಹೋದ ಮೂರು ತಿಂಗಳಿಗೆ ಅವರ

ಮನೆಯಲ್ಲಿ ಊಟ ಮಟ ಮಟ ಮಧ್ಯಾಹ್ನಕ್ಕೆ; ಯಾವಾಗಲೂ ಮಡಿ ಎಂದು ಗೋಳು ಹುಯ್ಕೋತಾರೆ. ನನಗೆ ಓದಲು ತೊಂದರೆಯಾಗುತ್ತೆ ಅಂತ ಪತ್ರ ಬರೆದ. ಮೈಸೂರಿಗೆ ಹೋದವರ ಬಳಿಯೆಲ್ಲ ಹೇಳಿಕಳಿಸತೊಡಗಿದ. ನಾನು ಮತ್ತಷ್ಟು ವಿಚಾರ ಮಾಡದೇ ಬೆಳೆಯುವ ಹುಡುಗ ಒಳ್ಳೆಯ ವಾತಾವರಣ ದಲ್ಲಿರಲಿ ಎಂದು ಮೈಸೂರಿಗೆ ಹೊರಟೆ. ಆಗೇನು ಈಗಿನ ಕಾಲದಂತೆ ಸರ್ಕಾರಿಯದೋ, ಖಾಸಗಿಯದೋ ಹಾಸ್ಟೆಲ್ಲುಗಳಿರಲಿಲ್ಲ. ನಮ್ಮ ಮತಸ್ಥರ ಮಠವಿತ್ತಾದರೂ ನಾರಾಯಣನ ಗುಣುಗಾಟದಿಂದ ಅದೂ ಬೇಡವೆಂದು ಎರಡು ದಿನ ಮೈಸೂರಲ್ಲೇ ಇದ್ದು ಈಗಿನ ಒಂಟಿಕೊಪ್ಪಲಿನಲ್ಲಿ ಕೋಣೆ ಯೊಂದನ್ನು ಹುಡುಕಿ ತೆಗೆಸಿದೆ. ಅಲ್ಲಿಂದ ಹಳ್ಳಿಗೆ ಬಂದವನೆ ಆತನಿಗೆ ತಿಂಗಳಿ ಗಾಗುವಷ್ಟು ದವಸ-ಧಾನ್ಯ ಕಳಿಸುತ್ತ, ಪ್ರತಿ ತಿಂಗಳೂ ಇಂತಿಷ್ಟು ಹಣ ಖರ್ಚಿಗೆ ತಪ್ಪದೆ ಕೊಡುತ್ತ ಅವನನ್ನು ದೊಡ್ಡ ವ್ಯಕ್ತಿಯನ್ನಾಗಿ ಮಾಡಿ, ಅದನ್ನು ಕಣ್ತುಂಬ ನೋಡಿ ಖುಷಿ ಪಡಲು ಪ್ರಯತ್ನಪಟ್ಟೆ.

ಮೈಸೂರಿನಲ್ಲಿ ನಾರಾಯಣನ ಎರಡು ವರ್ಷದ ಇಂಗ್ಲೀಷು ಓದು ಮುಗಿದಾಗ ನನಗೆ ಮೂವತ್ತು ಸಮೀಪಿಸಿತ್ತೇನೋ. ಭಾಗೀರಥಿ ಮ್ಯಾಟ್ರಿಕ್ ಮುಗಿಸಿದ್ದಳು. ಮೈ ನೆರೆದು ಮದುವೆಗಾಗಿ ತಯಾರಾಗಿ ನಿಂತಿದ್ದಳು. ಆಕೆ ಗೊಂದು ಕಡೆ ಒಳ್ಳೆಯ ಹುಡುಗನನ್ನು ನೋಡಿ ನಾಲ್ಕು ಅಕ್ಕಿಕಾಳು ಹಾಕಿ ನಿರಾಳವಾಗುವ ಆತುರ ನನ್ನದಾದರೆ ಅಮ್ಮನದು ಬೇರೆ. ನೀನು ಮನೆಯ ಹಿರಿಯ ಮಗ, ಬರೀ ದುಡಿದು ಹಣ್ಣಾಗುವುದೇ ಇಷ್ಟು ದಿನವಾಯ್ತು. ಈಗ ಲಾದರೂ ಮದುವೆಯಾಗೋ ಎಂದು ಆಕೆಯ ಒತ್ತಾಯ. ಆಕೆ ಹೇಳಿದ್ದು ನಿಜವಿತ್ತಾದರೂ ಈವರೆಗೆ ನಾನೆಂದೂ ದುಡಿದು ಹಣ್ಣಾಗಿರಲಿಲ್ಲ. ಮಣ್ಣಿನ ಜತೆ ಬೆರೆತು ಒಂದಾಗಿದ್ದವನಿಗೆ ಹೆಣ್ಣು ಬೇಕೆನಿಸಿರಲಿಲ್ಲ! ಅಪ್ಪಯ್ಯ ಆವತ್ತು ಹೇಳಿದ್ದರಲ್ಲ- 'ಮಣ್ಣು-ಹೆಣ್ಣು ಬಹಳ ಮೃದು ಮಾರಾಯ. ಮಣ್ಣಿನ ಒಡಲಿಗೆ, ಹೆಣ್ಣಿನ ಮನಸ್ಸಿಗೆ ಯಾವತ್ತೂ ಘಾಸಿ ಮಾಡಬಾರದು. ಅವೆರಡು ಮುನಿಸಿಕೊಂಡರೆ ಫಲ ಸಿಕ್ಕುದಿರಲಿ ಧೂಳಕಣಾನೂ ಸಿಕ್ಕಲ್ಲ....' ಅದೆಲ್ಲ ಯೋಚನೆ ಮಾಡಿದೆ. ಮದುವೆಯಾಗಿ ಒಂದು ಚಂದದ ಹುಡುಗಿಯನ್ನೇನೋ ಈ ಮನೆಗೆ ತರಬಹುದು. ಆದರೆ ತಂಗಿಯ ಮದುವೆ-ತಮ್ಮನ ಓದು, ಅಮ್ಮನ ಕಾಶೀಯಾತ್ರೆ, ಇನ್ನೇನು ಕೈಗೆ ಬರುವ ತೋಟದ ತೆಂಗು ಇವೆಲ್ಲದರ

ನಡುವೆ ಬಂದ ಹೆಣ್ಣಿಗೆ ತನ್ನನ್ನಿವ ಗಮನಿಸುವುದೇ ಇಲ್ಲವಲ್ಲ ಎಂಬ ಭಾವನೆ ಬರದಂತೆ ನೋಡಿಕೊಳ್ಳಲು ಸಾಧ್ಯವೇ ? ಗಂಡ ನೋಡಲಿ ಎಂದು ಆಕೆ ಮುಡಿ ತುಂಬ ಹೂಮುಡಿದು ನನಗಾಗಿ ಕಾದಾಗ ನಾನು ಭಾಗೀರಥಿಗೆ ಗಂಡು ಹುಡು ಕಲೋ, ನಾರಾಯಣನಿಗೆ ಹಣ ಕಳಿಸಲು ವ್ಯವಸ್ಥೆ ಮಾಡಲೋ, ಇಲ್ಲ ತೋಟ ನೋಡಿಕೊಂಡು ಬರುವೆ ತೆಂಗನ್ನು ಯಾರೋ ಕೆಡವಿದ್ದಾರಂತೆ ಎಂದೋ ಪಾಣಿಪಂಚೆ ಮೊಳಕಾಲಿಗೆ ಕಟ್ಟಿ ಓಡಿದರೆ.... ಬಂದ ಹುಡುಗಿಯ ಮನಸ್ಸು ಮುದುರಬಹುದು. ದೇಹ ಅರಳದೆ ಹೋಗಬಹುದು.... ಅದಕ್ಕೇ ಅಮ್ಮನಿ ಗೊಂದಿನ ಊಟಕ್ಕೆ ಕುಂತಾಗ ಹೇಳಿದೆ : 'ಸ್ವಲ್ಪ ತಡಿಯೇ ಅಮ್ಮ, ಇನ್ನೊಂ ದೆರಡು ವರ್ಷ. ನಾರಾಯಣನಿಗೆ ಕೆಲಸ ಸಿಕ್ಕು, ಭಾಗೀರಥಿ ಮದುವೆಯಾಗಿ ಬಿಟ್ಟರೆ ಅರ್ಧ ಹೆಗಲಭಾರ ಕಡಿಮೆಯಾಗುತ್ತೆ, ಆಮೇಲೆ ಇದ್ದೇ ಇದೆಯಲ್ಲ ನನ್ನ ಮದುವೆ....' ಅಮ್ಮ ಉಸಿರೆಳೆದು–'ಏನೊ ಕಂದಾ, ನಿನ್ನ ಇಚ್ಛೆ. ನಾನು ಕಣ್ಣು ಮುಚ್ಚುವುದರಲ್ಲಿ ನಿನ್ನ ಮಗನನ್ನ ಎತ್ತಿ ಆಡಿಸಬೇಕು–ಅಷ್ಟು ನಡೆಸಿ ಕೊಡು ಸಾಕು....' ಅಂದರು. ಅಮ್ಮ ತುಂಬ ವಿಚಿತ್ರ. ಮೂವತ್ತು ಮುಟ್ಟಿ ಬಲಭೀಮನಂತೆ ಬೆಳೆದ ಮಗನೂ ಆಕೆಗೆ ಮಾತ್ರ ಇನ್ನೂ ಮರೀ–ಕುರಿ, ಕಂದಾ, ವೃತ್ತಾ.... ತಾಯಿಯ ಕರುಳಲ್ಲವೇ ಅದು ? ಬೇರೆಯವರಿಗೆ ಅರಿ ವಾಗದಂತೆ ಎದೆಯೊಳಗೆ ಅದು ನದಿನೀರಿನಂತೆ ಹರಿಯುತ್ತೆ.... ಮಗ ಎಂಥವ ನಾದರೂ ಅವಳಿಗೆ ಮಗನೇ. ನಾರಾಯಣ ಆಕೆ ಬದುಕಿರುವವರೆಗೂ ಆಕೆಯ ಮನಸ್ಸಿಗೆ ನೋವಾಗುವ ಹಾಗೆ ನಡೆದುಕೊಂಡ. ಆದರೂ ಅವನ ವಿಚಾರ ವೆತ್ತಿದರೆ ಆ ನೋವೆಲ್ಲ ಮರೆತು ಬಿಡುತ್ತಿದ್ದಾಕೆ, ಅವನ ಬಾಲ್ಯದ ದಿನಗಳನ್ನು ನೆನಪಿಗೆ ತಂದುಕೊಂಡು ಅತ್ತುಬಿಡುತ್ತಿದ್ದಳಲ್ಲ.

ಂ ಂ ಂ

ಓದು ಮುಗಿಸಿ ಹಳ್ಳಿಗೆ ಮರಳಲು ಟ್ರಂಕಿನಲ್ಲಿ ಸಾಮಾನನ್ನೂ ನಾರಾ ಯಣ ಪೂರ್ಣವಾಗಿ ತುಂಬಿರಲಿಲ್ಲವೋ ಏನೋ. ಯೋಗಾಯೋಗ ಎನ್ನು ತ್ತಾರೇನೋ ಇದನ್ನು, ಆತನಿಗೆ ಅರಸೀಕೆರೆಯ ತಹಸೀಲಿನಲ್ಲಿ ಕೆಲಸ ಸಿಕ್ಕಿತು. ಹಳ್ಳಿಗೆ ತರಲು ಹೋಗಿದ್ದ ನಾನು ಅಂದು ಮನತುಂಬಿ ನಕ್ಕ. ನಿಂತ ಕಾಲ ಮೇಲೆ ಇಬ್ಬರೂ ಅರಸೀಕೆರೆಗೆ ಹೊರಟೆವು. ನಾರಾಯಣನ ವಸತಿಗಾಗಿ

ಅಲ್ಲೂ ಒಂದು ಮನೆಯನ್ನೇ ಬಾಡಿಗೆಗೆ ಹಿಡಿದೆವು. ಆತ ಕಚೇರಿಗೆ ಹೋಗಲು ಪ್ರಾರಂಭಿಸಿದ ಒಂದೆರಡು ದಿನದಲ್ಲಿ ನಾನು ಹಳ್ಳಿಗೆ ಮರಳಿದೆ.

ಆಮೇಲೆ ಉಳಿದದ್ದು ಭಾಗೀರಥಿಯ ಮದುವೆಯ ವಿಚಾರ. ಅಪ್ಪಯ್ಯನ ನನ್ನ ಶಾನುಭೋಗಿಕೆ ಈ ವಿಷಯದಲ್ಲಿ ಸಹಾಯಕ್ಕೆ ಬಂತು. ನಮ್ಮ ಜಿಲ್ಲೆಯ ಸುತ್ತಮುತ್ತ ನಮ್ಮ ಮತಸ್ಥರಿಗೇನೂ ಕಡಿಮೆಯಿರಲಿಲ್ಲವಲ್ಲ. ಆದರೂ ವರನನ್ನು ಹುಡುಕಲು ಆರು ಮಾಸಗಳೇ ಬೇಕಾದವು. ಕಡೆಗೆ ಹುಡುಗ ಸಿಕ್ಕಿದ್ದು ಮಲೆನಾಡಿನಲ್ಲಿ. ಒಂದು ಚಿಕ್ಕಹಳ್ಳಿಯಲ್ಲಿ ಹೊಲ ಮನೆ ಕೆಲಸ ಮಾಡಿಕೊಂಡಿದ್ದ. ಒಳ್ಳೆಯವ. ಹಳ್ಳಿಯ ಗುಂಟ, ಅವರೂರಲ್ಲಿ, ಸೀತಾ ನದಿಯೂ ಹರಿಯುತ್ತಿತ್ತು. ಹುಡುಗ ಸುರೇಂದ್ರನಾಥ. ಭಾಗೀರಥಿಯ ಮದುವೆಯಾದದ್ದು ಕಾರ್ತೀಕ ಮಾಸದ ಕೊನೆಯಲ್ಲಿ, ಮದುವೆಗೂ ಮೊದಲೇ ಪ್ರೈನೆರೆದು ಕೂತಿದ್ದರಿಂದ ತಡಮಾಡದೆ ಸೀತಾನದಿ ಸುರೇಂದ್ರನ ಮನೆಗೆ ಕಳಿಸಿಬಿಟ್ಟೆವು. ಅರಸೀಕೆರೆವರೆಗೂ ಜೋಡೆತ್ತಿನ ಬಂಡಿಯಲ್ಲಿ–ಅಲ್ಲಿಂದ ಕಂಪೆನಿ ಬಸ್ಸು. ಭಾಗೀರಥಿಯನ್ನು ಅತ್ತೆಯ ಮನೆಗೆ ಬಿಟ್ಟು ಬರಲು, ಒಂದೆರಡು ದಿನ ಮಲೆನಾಡಿನಲ್ಲಿದ್ದರೆ, ಹವಾಮಾನ ಬದಲಾದರೆ ಆಕೆಗೂ ಬೇಸರ ನೀಗೀತೆಂದು ಅಮ್ಮಳನ್ನೂ ಸಹ ಭಾಗೀರಥಿಯೊಂದಿಗೆ ಕಳಿಸಿದೆ....

ಅಮ್ಮ ಬರಲು ಒಂದೆರಡು ತಿಂಗಳಾದರೂ ಬೇಕಿತ್ತು. ಹಳ್ಳಿ ಮನೆಯಲ್ಲೀಗ ನಾನೊಬ್ಬನೇ ಉಳಿದೆ. ಹೊತ್ತು ಕಳೆಯಲು ಒಂದಿಷ್ಟು ಪುಸ್ತಕಗಳನ್ನು ಹೊತ್ತು ತಂದೆ. ತೋಟವನ್ನು ಇನ್ನಷ್ಟು ಚೊಕ್ಕಟ್ಟ ಮಾಡಿ, ಮತ್ತೆ ನೂರರಷ್ಟು ತೆಂಗು ಸಸಿ ನೆಟ್ಟೆ. ಈ ಹಿಂದೆ ಭಾಗೀರಥಿ ಪ್ರೈಮರಿಯಲ್ಲಿದ್ದಾಗ ನೆಟ್ಟಿದ್ದ ಸಸಿ ಬೆಳೆದು ಮರವಾಗಿ ಫಲ ತೂಗಿ ತೊನೆಯುತ್ತಿದ್ದವು. ಮುಂದಿನ ಕೆಲ ದಿನಕ್ಕೇ ಅವನ್ನು ಕೆಡವಿಸಿ ಒಣಗಲು ಹಾಕಿಸಬೇಕಿತ್ತು. ಇದೇ ಬಿಡುವಿನ ವೇಳೆಯಲ್ಲಿ ನನಗೆ ಇನ್ನೂ ಒಂದು ವಿಚಾರ ಬಂತು ; ತೋಟ ಮಾಡಿಯೂ ಇನ್ನೂ ಸ್ವಲ್ಪ ಹಾಳು ಬಿದ್ದ ಮನೆಯ ಹಿತ್ತಲಲ್ಲಿ ಮತ್ತಷ್ಟು ತರಕಾರಿ ಬೆಳೆಸುವುದು ಒಂದಾದರೆ, ಇನ್ನೊಂದು ಸಂಪಿಗೆ ಹಳ್ಳಿಯ ಹಾಲಕ್ಕಿಗೌಡರ ಬಳಿ ಮೂವತ್ತು ರೂಪಾಯಿಗೆ ಕೊಂಡಿದ್ದ ತೆಂಗಿನ ತೋಟದ ಪಕ್ಕದಲ್ಲಿದ್ದ ಸ್ಥಳದಲ್ಲಿ ಚಿಕ್ಕ ಮನೆಯೊಂದಕ್ಕೆ ಅಡಿಪಾಯ ಹಾಕುವುದು. ಈಗಿದ್ದುದು ಹಿರಿಯರಿಂದ ಬಂದ ಒಂದು ಮನೆ ಮಾತ್ರ. ನಾರಾಯಣನೂ ನಾಳೆ ಮದುವೆ

ಯಾಗಿ ಸಂಸಾರ ವಂದಿಗನಾದರೆ ಆವನ ಮಕ್ಕಳ ಮರಿಗೆ ಹೇಗಿದ್ದರೂ ಇರಲು ಮನೆ ಬೇಕಿತ್ತಲ್ಲ. ಅವನೇನೋ ಊರೂರು ಅಲೆಯುವ ಸರ್ಕಾರಿ ಖಾತೆ ಯಲ್ಲಿದ್ದರೂ ಆತನಿಗಾಗಿ ಮನೆ ಕಟ್ಟಿ ಕೊಡುವುದು, ತಂದೆಯಿಲ್ಲದ ಅವನಿಗೆ ನಾನೇ ನಿಂತು ಆ ಕಾರ್ಯ ನೆರವೇರಿಸುವುದು, ನನ್ನ ಕರ್ತವ್ಯವೆನಿಸಿತು. ಹಾಗ ನಿಸಿದ್ದೇ ಅರಸೀಕೆರೆಯಿಂದ ಎರಡು ದಿನದ ಮಟ್ಟಿಗೆ ಬಂದು ಹೋಗುವಂತೆ ನಾರಾಯಣನಿಗೆ ಟಪಾಲು ಬರೆದು ಹಾಕಿ, ಮನೆಗೆ ಬೀಗ ಒತ್ತಿ ನಾನು ಬಂಡಿ ಯಲ್ಲಿ ಸಂಪಿಗೆ ಹಳ್ಳಿಗೆ ನಡೆದೆ. ದೊಡ್ಡ ಗೌಡರಿಗೆ ನನ್ನ ಮಾತು ಒಪ್ಪಿಗೆ ಯಾಗಿ ಮರಕೆಲಸಕ್ಕೆ ತಮ್ಮ ತೋಟದ ಹಲಸಿನಮರ ಬೀಳಿಸಿ ಕೊಡಲು ಮುಂದಾದರು. ಕಿರಿಯ ಗೌಡರು ಮೇಸ್ತ್ರಿಯೊಬ್ಬನನ್ನು ಗೊತ್ತು ಮಾಡಿ ನನ್ನೊಂದಿಗೇನೆ ಬಂಡಿಯಲ್ಲಿ ಅವನನ್ನು ಹಳ್ಳಿಗೆ ಅಟ್ಟಿದರು. ಮನೆ ಕಟ್ಟುವ ಜಾಗವೆಲ್ಲ ಸ್ವಚ್ಛ ಮಾಡಿ, ನಾರಾಯಣ ಬಂದ ಮೇಲೆ ಗುದ್ದಲಿ ಪೂಜೆ ಮಾಡಿ ದರಾಯಿತೆಂದು ಕಾದೆವು. ಆದರೆ ನಾರಾಯಣ 'ತನಗೆ ಕಚೇರಿಯ ವತಿಯಿಂದ ಹಳ್ಳಿಗಳಿಗೆ ಸರ್ವೇಟೂರ್ ಇರುವುದೆಂದೂ, ನೀನು ಕೈಗೊಂಡ ನಿರ್ಧಾರಕ್ಕೆ ತನ್ನದೇನೂ ಅಭ್ಯಂತರವಿಲ್ಲವೆಂದೂ, ನೀನೇ ನಾನೆಂದುಕೊಂಡು ಅಡಿಪಾಯದ ಕೆಲಸ ನಿರ್ವಹಿಸಿದರಾಯಿತೆಂದೂ'–ಬಹಳ ಲೌಕಿಕದ ಟಪಾಲೊಂದನ್ನು ಬರೆದ. ನಿಜವೆಂದರೆ ಆ ಪತ್ರ ನೋಡಿದ ಮೇಲೆ ನನ್ನ ಉತ್ಸಾಹ ಜರ್‍ರನೆ ಕುಗ್ಗಿ ಹೋದರೂ ಮುಂದೆ ಎಲ್ಲರ ಒಳಿತಿನ ದೃಷ್ಟಿಯಿಂದಾಗಿ–ಕರ್ತವ್ಯವೆಂಬಂತೆ ಅಡಿಪಾಯದ ಕೆಲಸದೆಡೆ ಮುತುವರ್ಜಿ ವಹಿಸಿದೆ. ಸಿದ್ಧರ ಗುಡ್ಡದಿಂದ ಕಲ್ಲು ಒಡೆಸಿ ತಂದು ಒಟ್ಟಿದೆ. ಗಾರೆಗಾಗಿ ಮೈಸೂರಿಗೂ ಹೋಗಿಬಂದೆ. ಕೆಲಸ ನಿಧಾನವಾದರೂ ಅಡ್ಡಿಯಿಲ್ಲವೆಂಬ ಕಾರಣಕ್ಕೆ ನಾಕು ಗಂಡಾಳು–ಎರಡು ಹೆಣ್ಣಾಳುಗಳನ್ನು ಮಾತ್ರ ಗೊತ್ತುಮಾಡಿ ನಾನೇ ಅವರಿಗೆ–ಶಾನುಭೋಗಿಕೆಯ ಕೆಲಸದಿಂದ, ತೋಟದ ಕೆಲಸದಿಂದ ಬಿಡುವಾದಾಗ ಉಸ್ತುವಾರಿ ವಹಿಸಿದೆ. ಒಂದು ತಿಂಗಳಲ್ಲಿ ಮನೆ ಕಟ್ಟುವುದು ಮುಕ್ಕಾಲು ಮುಗಿದು ತೊಲೆ ಸಿಕ್ಕಿಸಿ ಗಾರೆ ಹಾಕುವ ಕೆಲಸ ಮಾತ್ರ ಬಾಕಿವುಳಿಯಿತು.

ಈ ನಡುವೆ ಅಮ್ಮನಿಲ್ಲದ ಮನೆ ಯಾಕೋ ರುಚಿಸುತ್ತಿರಲಿಲ್ಲ. ಮಧ್ಯಾ ಹ್ನದ ಬಿಸಿಲಲ್ಲಿ ಕಂಬಕ್ಕೊರಗಿದಾಗ ತಟ್ಟನೆ ಒಂಟಿ ಅನಿಸಿಬಿಡುತ್ತಿತ್ತು. ಜತೆ ಯಲ್ಲಿ ಬೇಕು ಯಾರಾದರೂ, ಅದೂ ಹೆಣ್ಣು ಅಂತನಿಸುತ್ತಿತ್ತು. ಮನೆಯಲ್ಲಿ

ಅಮ್ಮ ಹೋದ ಮೇಲೆ ಒಲೆ ನೆಟ್ಟಗೆ ಉರಿ ಕಂಡಿರಲಿಲ್ಲ. ಬೆಳಿಗ್ಗೆ ಮಾತ್ರ ಅನ್ನವೊಂದನ್ನು ಬೇಯಿಸಿಕೊಳ್ಳುತ್ತಿದ್ದೆ. ದೊಡ್ಡಪ್ಪನ ಮನೆಯಿಂದ ಸಾರು-ಹುಳಿ ಕಳಿಸಲ ಎಂದು ಕೇಳಿದರೂ ನಾನಾಗೆ ಬೇಡವೆಂದು ಬಿಡುತ್ತಿದ್ದೆ. ಅಮ್ಮ ಮುಂಚೆಯೇ ನನಗೊಬ್ಬನಿಗೆ ಸಾಕಾಗುವಷ್ಟು ಮೆಂತ್ಯದ ಹಿಟ್ಟು, ಅಗಸೆ ಪುಡಿ, ಕಾರೆಳ್ಳು ಹಿಂಡಿ, ಮಿಡಿ ಉಪ್ಪಿನಕಾಯಿ, ಹೀಗೆ ರಾಶಿ ಎಲೆ ತುದಿಯ ವ್ಯಂಜನ ಪದಾರ್ಥಗಳನ್ನು ಮಾಡಿಟ್ಟು ಹೋಗಿದ್ದಳಲ್ಲ. ಅಮ್ಮನ ಮಿಡಿ ಉಪ್ಪಿನ ಕಾಯಿಯೆಂದರೆ ರುಚಿಯೋ ರುಚಿ. ಅನ್ನದೊಂದಿಗೆ ಆ ಉಪ್ಪಿನಕಾಯಿ ಕಲಿಸಿ, ತುಸು ಶೇಂಗಾ ಎಣ್ಣೆ ಹಾಕಿ ತಿಂದರೆ ಅದರ ಸ್ವಾದ ನೆತ್ತಿಗೇರುತ್ತಿತ್ತು. ಮೇಲಾಗಿ ಮನೆಯ ಒಕ್ಕಲಿಗರು ಹಯನದ ಹಾಲು-ಕೆನೆ ಮೊಸರಂತೂ ತಪ್ಪದೆ ತಂದುಕೊಟ್ಟೇ ಕೊಡುತ್ತಿದ್ದರು. ಊಟದ್ಯಾವತ್ತೂ ನನಗೆ ಸಮಸ್ಯೆ ಎನಿಸ ಲಿಲ್ಲ.

ಮನೆಯಲ್ಲಿನ ಒಕ್ಕಲಿಗರಿಗೆ ಕೆಲಸ ಹಚ್ಚುವುದು, ಮನೆಯ ಕಟ್ಟಡದ ಮೇಲುಸ್ತುವಾರಿ ನೋಡುವುದು ಇಂಥ ಕೆಲಸಗಳ ನಡುವೆ ಬಿಡುವಾದರೂ ಎಲ್ಲಿತ್ತು ನನಗೆ ? ವಾರದ ಮೂರುದಿನ ಸುತ್ತೂರ ಹಳ್ಳಿಗಳ ಜಮೀನುಸರ್ವೆ, ಪಾಣಿ ಬರೆಯುವುದು, ವ್ಯಾಪಾರ ಕುದುರಿಸುವುದು, ತಾಲೂಕಿನ ಕೋರ್ಟಿಗೆ ಸ್ಟ್ಯಾಂಪು ಪತ್ರಕ್ಕಾಗಿ ಓಡಾಡುವುದು ಇದರಲ್ಲೇ ಕಳೆದುಹೋಗಿಬಿಡುತ್ತಿತ್ತು. ಆದರೂ ಈ ಮಧ್ಯೆ ಸಮಯ ದೊರೆತಾಗ ಸುಮ್ಮನೆ ನಿಂತಾಗಲೋ, ಕುಳಿತಾಗಲೋ ಅಪ್ಪಯ್ಯನಿಗೆ ಇಷ್ಟವಾದ ಗದುಗಿನ ಭಾರತದ ಸರ್ಗಗಳನ್ನು ಓದು ವಾಗಲೋ ಇದ್ದಕ್ಕಿದ್ದಂತೆ ಅನ್ಯಮನಸ್ಕತೆ ಆವರಿಸಿ ಬಿಡುತ್ತಿತ್ತು. ಒಂಟಿ ಅನಿಸುತ್ತಿತ್ತು. ಒಮ್ಮೆ ಹೀಗೆ ಅಮ್ಮನ ನೆನಪು ಬಲವಾಗಿ ಕಾಡಿದಾಗ ಅರಸೀ ಕೆರೆಗೆ ನಾರಾಯಣನನ್ನು ಕಾಣಲು ಹೋದೆ. ಎಷ್ಟೆಂದರೂ ನನ್ನದೇ ರಕ್ತ ಹಂಚಿಕೊಂಡು ಹುಟ್ಟಿದವನಲ್ಲ, ಅವನನ್ನು ಕಂಡರಾದರೂ ಸಮಾಧಾನ ವಾದೀತು ಎಂದು. ಹಲವೊಮ್ಮೆ ಹಾಗಾಗುತ್ತದೆ. ಬೇಕಿರುವವರು ಸಿಕ್ಕದಾ ದಾಗ ಅವರನ್ನು ಹೋಲುವವರು, ಅಥವ ಅವರ ಒಡನಾಡಿಗಳು ಬೇಕಿರುವವ ರಂತೆ ಕಾಣುತ್ತಾರೆ. ಅಂಥವರನ್ನು ನೋಡಿದಾಗ ಮನಸ್ಸಿಗೆ ಎಷ್ಟೋ ಸಮಾ ಧಾನವಾಗುತ್ತದೆ. ಆದರೆ ನಾರಾಯಣ ಬೇಕೆಂದಾಗ ಸಿಕ್ಕಲು ಶಾನುಭೋಗ ನಾಗಿ ಕೆಟ್ಟೋದನೆ ? ಅವನೀಗ ಸರ್ಕಾರಿ ಇಲಾಖೆಯವ. ಅಸರಂತ ದೊಡ್ಡ

ಸಾಹೇಬರನ್ನು ಕಾಣಲು, ಇಲ್ಲ ಸರ್ವೆಗೆಂದು ಊರೂರು ಅಲೆಯುವವನು. ಈ ಸಲ ಹೋದಾಗಲೂ ಹಾಗಾಯಿತು. ನಾರಾಯಣ ಡಿ.ಸಿ. ಸಾಹೇಬರನ್ನು ಕಾಣಲು ಮಂಗಳೂರ ಕಡೆಗೆ ಹೋಗಿದ್ದ. ಅಲ್ಲಿ ಡಿ.ಸಿ. ಸಾಹೇಬರ ಕೈಕೆಳಗಿನ ಸಾಹೇಬರಿಗೆಲ್ಲ ಎಂಥದ್ದೋ ಒಂದು ಮೀಟಿಂಗು. ನಾರಾಯಣನೂ ಸಿಕ್ಕದಾದಾಗ ನನಗೆ ತುಸು ಬೇಸರವಾಯಿತು. ಬೇಸರ ಕಳೆಯಲು ಯಾವುದೋ ಹೊಸದಾಗಿ ಪ್ರಾರಂಭವಾದ ಹೋಟೆಲಿಗೆ ಹೋಗಿ ಚೆನ್ನಾಗಿ ತಿಂದೆ. ರುಚಿಯಾದ ತಿಂಡಿ. ಯಾರೋ ಹುಬ್ಬಳ್ಳಿ–ರಾಣಿಬೆನ್ನೂರಿನ ಕಡೆಯ ಲಿಂಗಾಯತರ ಹೋಟೇಲದು. ಆಮೇಲೆ ಟೆಂಟು ಥೇಟರಿನಲ್ಲಿ ಎಂಥದ್ದೋ ಒಂದು ಹಿಂದಿ ಸಿನೆಮಾ ನೋಡಿದೆ. ರಾತ್ರಿ ಹಳ್ಳಿಗೆ ಹೊರಟ ಎತ್ತಿನಗಾಡಿಯಲ್ಲಿ ಹೊರಟು ಮರಳಿ ಮನೆಗೆ ಬಂದು ಮಲಗಿದಾಗ ಮನಸ್ಸಿಗೆ – ದೇಹಕ್ಕೆ ವಿಚಿತ್ರ ರೀತಿಯ ಸಮಾಧಾನ : ಅಂದು ರಾತ್ರಿ ದೇಹ ಗಾಳಿಯಲ್ಲಿ ತೂರಿದ ಹಾಗೆ ಕಣ್ತುಂಬ ನಿದ್ದೆ ಬಂತು.

ಅದಾದಮೇಲೆಯೂ ಕಾಯಿಗಿಟುಕ ಮಾರಲು ; ಗೊಬ್ಬರ – ತೆಂಗುಸಸಿ ಕೊಳ್ಳಲು ; ಹೊಸಮನೆಯ ಸರಂಜಾಮು ಕೊಳ್ಳಲು ಅರಸೀಕರೆ ಆಗೀಗ ಹೋಗಿಬಂದು ಮಾಡಿದೆ. ಈ ನಡುವೆ ತೀರ್ಥಹಳ್ಳಿಯ ಕಡೆಯ ದೇಸಗತಿ ಬ್ರಾಹ್ಮಣರೊಬ್ಬರು ಸಂಭಾವನೆಗೆಂದು ಹಳ್ಳಿಗೆ ಬಂದರು. ಕೊಟ್ಟಾಗ ದೇವ ಬ್ರಾಹ್ಮಣರಿಗೆ ಕಡಿಮೆ ಮಾಡಬಾರದೆಂದು ಯಥೇಚ್ಚ ಸಂಭಾವನೆ ಕೊಟ್ಟು ಹಾಗೇ ಸೀತಾನದಿಯ ಸುರೇಂದ್ರನಿಗೂ ಅಮ್ಮಳನ್ನು ಕಳಿಸುವಂತೆ ತುರ್ತಿನ ಸುದ್ದಿ ಕಳಿಸಿದೆ, ಅಮ್ಮ ಹೋಗಿ ಮೂರುತಿಂಗಳ ಮೇಲಾಗಿತ್ತು ! ನಾನಾಕೆಯನ್ನು ಹುಟ್ಟಿದಾಗಿನಿಂದ ಇಷ್ಟು ದಿನಕಾಲ ಬಿಟ್ಟಿದ್ದ ನೆನಪೇ ಇಲ್ಲ. ಅಲ್ಲದೆ ಸುಣ್ಣ–ಹುರಿಮಂಜು ಹಚ್ಚಿಕೊಂಡು ಹೊಸಮನೆ ವಾಸ್ತುಸಮಾರಾಧನೆಗಾಗಿ ಕಾಯುತ್ತಿತ್ತು. ಅಮ್ಮ, ಭಾಗೀರಥಿ, ನಾರಾಯಣರಿಲ್ಲದೆ ಮನೆಯ ಪ್ರವೇಶ ಮಾಡುವುದಾದರೂ ಎಂತು ? ಹಾಗಂತಲೇ ಭಾಗೀರಥಿ – ಸುರೇಂದ್ರ ಇಬ್ಬರನ್ನೂ ಕರೆತರುವಂತೆ ದೇಶಾವರದ ಬ್ರಾಹ್ಮಣರೊಂದಿಗೇನೆ ವೀಳ್ಯಕೊಟ್ಟು ಕಳಿಸಿದೆ. ಈ ಸುದ್ದಿ ಅರಸೀಕೆರೆಗೆ ಹೋಗಿ ನಾರಾಯಣನಿಗೂ ಅರುಹಿದೆ. ಅವ ಎಂದಿನಂತೆ ನೀ ಹೇಗೆ ಹೇಳಿವರೆ ಹಾಗೆ ಅಂದುಬಿಟ್ಟ. ಅವನ ವೇಷ–ಭೂಷಣಗಳೂ ಈಗ ಸಾಕಷ್ಟು ಬದಲಾಗುವುದರೊಂದಿಗೆ ನಡುವಳಿಕೆಯೂ

ಬದಲಾಗಿತ್ತು. ಮೂಲಂಗಿ ಪ್ಯಾಂಟು–ಬುಷ್‌ಶರ್ಟ್‌ನೊಂದಿಗೆ ಕೊರಳಿಗೆ ಟೈ ಬಂದಿದ್ದರೆ ನನ್ನೊಂದಿಗೆ ಮಾತಾಡುವಾಗಲೂ 'ಹಾಗಲ್ಲ ಬ್ರದರ್ ಯೂ ಸೀ, ಹೇಗೆಂದರೆ ವಾಟ್ ಐ ಮೀನ್....' ಇಂಥ ಮಾತುಗಳು ಸೇರಿರುತ್ತಿದ್ದವು. ಮೂರು ತಿಂಗಳಿಂದ ಅಮ್ಮ ಹಳ್ಳಿಯಲ್ಲಿಲ್ಲದಿದ್ದರೂ, ಹೊಸಮನೆಯ ಕೆಲಸ ನಿಲ್ಲದೆ ಸಾಗಿದ್ದರೂ, ಆತ ಅದ್ಯಾವುದರ ಬಗ್ಗೆಯೂ ಆಸಕ್ತಿ ತೋರಿಸಲಿಲ್ಲ. ಮದುವೆಯಾದ ಭಾಗೀರಥಿಯ ವಿಷಯ ಏನಾದರೂ ತಿಳಿಯಿತಾ ಎಂದು ಕೇಳ ಲಿಲ್ಲ. ಮನೆ ಕಟ್ಟಿಸಲು ಹಣ ಎಲ್ಲಿಂದ ತಂದೆ ? ತೋಟದ ಯಾವ ಮರದಲ್ಲಿ, ಎಷ್ಟು ಕಾಯಿ ಬಿಟ್ಟವು ?.... ಊಹೂಂ. ಇದೊಂದು ಅವನಿಗೆ ಬೇಡ. ಅಪ್ಪಯ್ಯ ಹೇಳಿರಲಿಲ್ಲವೆ ? 'ಅವನು ನಿರ್ಲಿಪ್ತ. ಅವನನ್ನು ಹೆಚ್ಚಿಗೇನೂ ವಿಚಾರಿಸಬೇಡಿ. ನಿರ್ಲಿಪ್ತರು ಒಳಗೆ ಆಸಕ್ತಿಯಿದ್ದರೂ ಹೊರಗೇನನ್ನೂ ತೋರರು. ಸೂಕ್ಷ್ಮಮತಿಗಳು ಅವರನ್ನು ಅರಿತುಕೊಂಡು ತಾವೇ ಮುಂದಾಗಿ ಅವರಿಗೆ ಬೇಕಿರುವುದನ್ನು ಕೊಡಬೇಕು'–ಅಂತ. ಅಂತಲೇ ಈ ಸಲ ಭೇಟಿ ಯಾದಾಗ ನಾರಾಯಣನಿಗೆ ಹೇಳಿದ್ದೆ : 'ನಾರಾಯಣ ಹೊಸಮನೆಯ ಪಟ್ಟಾ ನಿನ್ನ ಹೆಸರಿಗೆ ಮಾಡಿಸಿದ್ದೇನೆ. ಈ ವಾರದಲ್ಲಿ ಅರಸೀಕೆರೆ ತಾಲ್ಲೂಕು ಕಛೇರಿ ಯಲ್ಲಿ ರಿಜಿಸ್ಟರ್ ಆಗುತ್ತೆ. ಬಿಡುವಾದಾಗ ಬಂದು ನೀನು ಸಹಿ ಮಾಡಿ ಬಿಡು. ಅಮ್ಮ–ಭಾಗೀರಥಿ ಬಂದಮೇಲೆ ದಿನ ಗೊತ್ತುಮಾಡಿ ಗೃಹಪ್ರವೇಶ ಮಾಡಿಬಿಡೋಣ. ನೀನೂ ಹಳ್ಳಿಗೆ ಬಂದು ಎಷ್ಟೋ ದಿನಗಳಾದವು. ಒಮ್ಮೆ ಬಂದು ಮನೆ–ತೋಟ, ಒಕ್ಕಲಿನ ಮಂದಿಯನ್ನು ನೋಡಿಕೊಂಡು ಹೋಗು' ಎಂದು. ಇಷ್ಟೆಲ್ಲ ಮಾತಿಗೆ ಆತ ಉತ್ತರಕೊಟ್ಟದ್ದು 'ನೋಡೋಣ'–ಎಂದು– ಅಷ್ಟೇ. ನಾನೂ ಅವನನ್ನು ಅರಿತುಕೊಂಡು ಹೆಚ್ಚಿಗೇನೂ ಒತ್ತಾಯಿಸದೆ ನನ್ನ ಕರ್ತವ್ಯದ ಕೆಲಸಗಳನ್ನು ನಾನು ಮಾಡುತ್ತ ಹೋದೆ. ಇಷ್ಟರಲ್ಲಿ ತೀರ್ಥ ಹಳ್ಳಿಯ ಕಡೆಯಿಂದ ಅಮ್ಮ ಮಗಳು–ಅಳಿಯನೊಂದಿಗೆ ಸೀಗೆಹುಣ್ಣಿಮೆ ದಿನ ಬರುತ್ತಾರೆಂದೂ, ಭಾಗೀರಥಿ ಮೈತುಂಬಿಕೊಂಡಿದ್ದಾಳೆ–ಎಂದು ಸಿಹಿಸುದ್ದಿ ಬಂದಿದ್ದರೆ–ಇತ್ತಕಡೆಯಿಂದ ಇನ್ನೊಂದು ಆಘಾತಕರ ಘಟನೆ ನಡೆಯಿತು. ಇದ್ದಕ್ಕಿದ್ದ ಹಾಗೆ ನಾರಾಯಣ ಕೆಲಸಕ್ಕೆ ರಾಜೀನಾಮೆ ಕೊಟ್ಟು ಸಾಮಾನು ಗಳೊಂದಿಗೆ ಹಳ್ಳಿಗೆ ಬಂದುಬಿಟ್ಟಿದ್ದ !

ಸೀತಾನದಿಯಿಂದ ತೀರ್ಥಹಳ್ಳಿಯವರೆಗೂ ಎತ್ತಿನಗಾಡಿಯಲ್ಲಿ ಬಂದು,

ಅಲ್ಲಿಂದ ಅರಸೀಕೆರೆಯವರೆಗೂ ಗಿರಿಜಾಶಂಕರದಲ್ಲಿ, ಆಮೇಲಲ್ಲಿಂದ ನಮ್ಮ ಎತ್ತಿನ ಗಾಡಿಯಲ್ಲಿ ಅಮ್ಮ-ಭಾಗೀರಥಿ, ಸುರೇಂದ್ರ ಹಳ್ಳಿಗೆ ತಲುಪಿದಾಗ ಮುಂಜಾವು ಮೂಡಿತ್ತು. ನಾನು, ಅವರು ಬಂದಾಗ ಹಿತ್ತಲಲ್ಲಿ ಕಪಿಲೆ ಆಕಳಿಗೆ ಮೈತೊಳೆಸುತ್ತಿದ್ದೆ. ಆಗ ನನಗೆ ಅಪ್ಪಯ್ಯನ ನೆನಪು ಮೂಡಿ ಬಂದಿತ್ತು. ಒಂದೆ ಘೇಟು ಈಗ ಕಟ್ಟಿರುವ ಹಾಗೆ ಮೊಳಕಾಲಿಗೆ ಪಾಣಿ ಪಂಚೆ ಕಟ್ಟಿ ದೋಣಿಯ ಗೂಟಕ್ಕೆ ಕಪಿಲೆಯ ಅಮ್ಮಳ ಅಮ್ಮ ರೋಹಿಣಿ ಯನ್ನು ಅಪ್ಪಯ್ಯ ಕೊಂಬಿಡಿದು ಮೈಗೆ ನೀರು ಸುರಿಯುವುದನ್ನು ಚಪ್ಪಾಳೆ ತಟ್ಟುತ್ತ ನಾನು ನೋಡುತ್ತಿದ್ದೆ. ರೋಹಿಣಿ ಕೊಂಬಲಗಿಸಿದಾಗ ಅದನ್ನು ಹಿಡಿಯಲು ಹೋಗುವ ಅಪ್ಪಯ್ಯನ ಕಿವಿಯ ಒಂಟಿಗಳು ಗಲಗಲ ಅಲುಗಿ ಹೊಳೆಯುತ್ತಿದ್ದವು. ಬೆನ್ನ ಮೇಲಿನ ಜನಿವಾರ ಸರ್‍ರನೆ ಸೊಂಟಕ್ಕಿಳಿಯು ತ್ತಿತ್ತು. ಆಗ ಅಪ್ಪಯ್ಯ– 'ಯಾಕೆ ರೋಹಿಣಿ ನನ್ನ ಮೇಲೂ ಮುನಿಸೇನೆ!' ಅಂತ ಒಂದು ಕೈಯಿಂದ ಅದರ ಕೊರಳು ತೀಡುತ್ತ, ಇನ್ನೊಂದು ಕೈಯಿಂದ ಜನಿವಾರ ಪರಿಸುತ್ತಿದ್ದರು.... ಅಪ್ಪಯ್ಯನನ್ನು ನೆನಪಿಸಿಕೊಳ್ಳುವುದರಲ್ಲೇ ಎಷ್ಟು ಖುಷಿಯಿದೆಯಲ್ಲ ಎಂದುಕೊಳ್ಳುತ್ತಿರುವಾಗಲೇ. ಅಂಗಳದಲ್ಲಿ ಎತ್ತಿನ ಗಾಡಿ ನಿಂತ ಸದ್ದು, ಎತ್ತುಗಳ ಕೊರಳ ಗಂಟೆ ಸದ್ದು, ಭಾಗೀರಥಿಯ ಮಾತಿನ ಸದ್ದು.... ನಾನು ಒದ್ದೆ ಕೈಗಳನ್ನು ತಲೆಗೆ ಸುತ್ತಿದ್ದ ಅಂಗವಸ್ತ್ರ ಬಿಚ್ಚಿ ಒರೆಸಿ ಕೊಳ್ಳುತ್ತ ಅಂಗಳಕ್ಕೆ ಹಿತ್ತಲಿನಿಂದ ಓಡಿಬಂದೆ. ಬಂಡಿಯಿಂದ ಇಳಿದು ಕೈಯಲ್ಲಿ ಟ್ರಂಕು ಹಿಡಿದಿದ್ದ ಭಾಗೀರಥಿ– 'ಅಮ್ಮ ಅಲ್ನೋಡು ಜಗುಲಿಗಟ್ಟೆಗೆ ನಾಣಿ....' ಅಂತ ಅಕ್ಷರಶಃ ಕೂಗಿದಳು. ಜಗುಲಿಕಟ್ಟೆಗೆ ಚಕ್ಕಲಮಕ್ಕಲೆ ಹಾಕಿ ಕೂತಿದ್ದ ನಾರಾಯಣನತ್ತ ನಾನು ತಿರುಗಿ ನೋಡಿದೆ. ಆತ ಬರೀ ನಕ್ಕು ಸುಮ್ಮನಾದ. 'ಯಾವಾಗ ಬಂದೆಯೋ ನಾಣೀ'– ಎಂದು ಅಮ್ಮ ಜಗುಲಿ ಯತ್ತ ನಡೆದಾಗ ಭಾಗೀರಥಿ ಅಮ್ಮಳನ್ನು ಹಿಂಬಾಲಿಸಿದಳು. ನಾನೂ ಇನ್ನೂ ಗಾಡಿಯಲ್ಲೇ ಕೂತಿದ್ದ ಸುರೇಂದ್ರನ ಬಳಿ ನಡೆದು ಆತನನ್ನು ಕೈಹಿಡಿದು ಇಳಿಸಿ, ಸಾಮಾನು ಒಳಗಿಡಲು ಸಜ್ಜಾದೆ.

ಸಾಮಾನನ್ನು ಒಳಗೆ ಸೇರಿಸಿದ್ದಾದ ಮೇಲೆ ನಾರಾಯಣನ ಅಕ್ಕ ಪಕ್ಕ ಕುಳಿತು ಮಾತುಕತೆ ನಡೆಸಿದ್ದ ಅಮ್ಮ-ಭಾಗೀರಥಿ, ಸುರೇಂದ್ರರ ಬಳಿ ನಾನೂ ಸೇರಿಕೊಂಡೆ. ಭಾಗೀರಥಿ ಮೈತುಂಬಿಕೊಂಡು ಲಕ್ಷಣವಾಗಿ ಕಾಣುತ್ತಿದ್ದಳು.

ನಾನು ಗೇಲಿ ಮಾಡುತ್ತ– 'ಮದುವೆಯಾಗಿ ನಾಲ್ಕು ತಿಂಗಳೂ ಆಗಿಲ್ಲ, ಆಗಲೇ ನೀನು ಮೂರು ತಿಂಗಳ ಬಸುರಿಯೇನೆ–' ಅಂತ ಛೇಡಿಸಿದೆ. ಸುರೇಂದ್ರ ನಾಚಿಕೆಯಲ್ಲಿ 'ಕಾಲು ತೊಳೆದು ಬರುವೆ' ಎಂದು ಬಚ್ಚಲಿಗೆ ನಡೆದ. ಭಾಗಿ– 'ಥೂ ಹೋಗು ಅಣ್ಣಯ್ಯ' ಎಂದು ಕೋಪ ನಟಿಸಿ, 'ನೋಡೋ ನಾಣಿ– ಅಣ್ಣಯ್ಯನ್ನ'– ನಾರಾಯಣನಿಗೆ ದೂರು ಹೇಳಿದಳು. 'ನಡೀರಿ ಎಲ್ರೂ ಸ್ನಾನಮಾಡಿ, ಒಂದಿಷ್ಟು ತಿಂಡಿ ಮಾಡ್ತೀನಿ'– ಅಂದಳು ಅಮ್ಮ. ಎಲ್ಲರೂ ಮೇಲೆದ್ದರು. 'ನಡಿಯೇ ಅಮ್ಮ ಇವತ್ತು ಕುಟ್ಟವಲಕ್ಕಿ ಮಾಡು, ನಾನೂ ಅಡುಗೆಗೆ ಸಹಾಯ ಮಾಡ್ತೀನಿ'– ಅಂತ ನಾನೆಂದೆ.

ಭಾಗೀರಥಿಗೆ ಮೊದಲಿಸಿಂದಲೂ ನಾರಾಯಣನ ಸಲುಗೆಯೇ ಹೆಚ್ಚು. ನನಗಿಂತ ಹತ್ತು ವರ್ಷ ಕಿರಿಯಳಾದ ಆಕೆ ಆಡಿ ಬೆಳೆದದ್ದು ಅವನೊಂದಿಗೇನೆ. ನಾನು ಅಪ್ಪಯ್ಯನ ಹಿಂದೆ ಶಾನುಭೋಗಿಕೆ ಕಲಿಯುತ್ತ ಸುತ್ತುವಾಗ ಅವ ರಿಬ್ಬರೂ ಸರ್ಕಾರಿ ಶಾಲೆಗೆ ಹೋಗುತ್ತಿದ್ದರು. ಅವರು ಓದು ಕಲಿಯಲು ಪ್ರಾರಂಭಿಸುವ ಕಾಲಕ್ಕಾಗಲೇ ಹಳ್ಳಿಯಲ್ಲಿದ್ದ ಶ್ರೀಕಂಠಐಗಳ ಮಗ ರಾಮಾ ಶಾಸ್ತ್ರಿಗಳು ದೇಶಾಂತರ ಹೋಗಿಬಿಟ್ಟಿದ್ದರಿಂದ ಐಗಳ ಮಠ ಮುಚ್ಚಿ ಬಿಟ್ಟಿದ್ದರು. ನಾನು ಶಾನುಭೋಗಿಕೆಯ ಪಟ್ಟಾ ಪುಸ್ತಕಕ್ಕೆ ರೂಲುದೊಣ್ಣೆ ಇಟ್ಟು ಗೀರು ಎಳೆಯುವುದು, ಮಗ್ಗಿ ಬಾಯಿಪಾಠ ಹಚ್ಚುವುದು, ಗದುಗಿನ ಭಾರತ ಓದುವುದು ಕಲಿತದ್ದು ಎಲ್ಲ ರಾಮಐಗಳ ಮಠದಲ್ಲಿಯೇ.... ನನಗ್ಯಾವತ್ತೂ ನೇರವಾಗಿ, ಸಲುಗೆಯಿಂದ ಬಳಕೆಗೆ ಬರದಿದ್ದುದರಿಂದ ಭಾಗೀರಥಿಗೆ ತುಸು ಸಂಕೋಚ, ನಾಚಿಕೆ ಯಾವಾಗಿನಕ್ಕಿಂತ ಹೆಚ್ಚಿಗೆ ಇರುತ್ತಿತ್ತು : ನನ್ನೊಂದಿಗೆ ಮಾತನಾಡುವ ಪ್ರಸಂಗ ಬಂದಾಗ. ಆಗಲೂ ಆಕೆ ಯಾವತ್ತೂ ನನ್ನೊಂದಿಗೆ ನನ್ನನ್ನು ಏಕವಚನದಲ್ಲಿ ಕರೆದವಳಲ್ಲ. ಭಾಗೀರಥಿಯದು ಹೀಗಾದರೆ ಅಷ್ಟೇನೂ ವಯಸ್ಸಿನ ಅಂತರವಿರದಿದ್ದರೂ ಸ್ವಭಾವತಃ ಮಾತು ಕಡಿಮೆಯಾದ ನಾರಾಣನದೂ ಸಹ ನೇರ ವ್ಯವಹಾರ– ಆಕಸ್ಮಿಕ ಮಾತುಕತೆ ಅಮ್ಮಳೊಂದಿಗೇನೆ. ನಾವೆಲ್ಲ ಒಂದೇ ಮನೆಯಲ್ಲಿ ಇದ್ದರೂ– ನಕ್ಕು ಹಗುರಾಗುವ ವಯಸ್ಸಾದರೂ ಯಾಕೋ ನಮ್ಮೆಲ್ಲರ ಮಧ್ಯೆ ಯಾವಾಗಲೂ ತುಸು ಬಿಗಿ ವಾತಾವರಣವೇ ಇರುತ್ತಿತ್ತು. ಅನೇಕ ದಿನಗಳ ಗಟ್ಟಲೆ ಮಾತುಕತೆ ನಡೆಯದೆ ಇದ್ದದ್ದೂ ಇದೆ. ಅಲ್ಲದೆ ಈಗಂತೂ ಬೆಳೆದು ತುಸು ದೊಡ್ಡವರಾಗಿದ್ದೆವು. ನಾರಾಯಣನೊಂದಿಗೆ

ಯಥಾಪ್ರಕಾರವಾಗಿದ್ದರೂ ಮದುವೆಗೆ ಮುಂಚಿನ ಕೆಲದಿನಗಳಿಂದ ಪರರ ಮನೆಗೆ ಹೋಗುವ ಹುಡುಗಿಗೆ ಹಠಾತ್ತಾಗಿ ಏಕಾಂಗಿತನ ಕಾಡದಿರಲೆಂದು ನಾನೇ ಮುಂದಾಗಿ ಭಾಗೀರಥಿಯ ಬೇಕು–ಬೇಡಗಳತ್ತ ಹೆಚ್ಚು ನಿಗಾವಹಿಸಿ ಅವಳನ್ನು ಖುಷಿಯಾಗಿಡಲು ಶಕ್ಯವಿರುವಷ್ಟು ಯತ್ನಿಸಿದೆ. ಮನೆಯ ಸಣ್ಣ ಪುಟ್ಟ ವ್ಯವಹಾರಗಳನ್ನು, ಹಣದ ಬಾಬತ್ತಿನ ವಿಚಾರವನ್ನು ಅವರಿಬ್ಬರ ಗಮನಕ್ಕೆ ತಂದು, ಹಣಕಾಸಿನ ಜವಾಬುದಾರಿಯನ್ನು ಭಾಗೀರಥಿಗೇನೆ ಒಪ್ಪಿಸಿದ್ದೆ. ಹೀಗಾಗಿ ಈಗಾಕೆಗೆ ಮೊದಲಿನಷ್ಟು ಸಂಕೋಚವಿಲ್ಲ.

೦ ೦ ೦

ಎಲ್ಲರೂ ಸ್ನಾನ ಫಳಾರ ಮುಗಿಸುವ ವೇಳೆಗೆ ಬಿಸಿಲು ಹೆಚ್ಚುತ್ತಿತ್ತು. ನಾನು ಇನ್ನೊಮ್ಮೆ ಮನೆಯತ್ತ ; ಬೇಸಾಯಗರರಿಗೆ ಪಾತಿಕಟ್ಟಿ ನೀರುಬಿಡಲು ಗೊಬ್ಬರ ಹರವಲು ಹೇಳಲು ತೋಟದತ್ತ ಹೋಗಬೇಕಿತ್ತು. ತಿಂಡಿಯನ್ನು ಮುಗಿಸಿದ್ದೇ ಅಮ್ಮಳಿಗೆ– 'ನೀವೆಲ್ಲ ಆಡ್ತಾ ಗಿ ಒಂದರ್ಧಗಳಿಗೆ. ತೋಟದತ್ತ ಹೋಗಿ ಬರ್ತೇನೆ. ಮಧ್ಯಾಹ್ನ ಊಟದ ನಂತರ ಬಿಸಿಲಿಳಿದ ಮೇಲೆ ಹೊಸ ಮನೆ ಕಡೆ ಎಲ್ಲರೂ ಹೋಗುವಾ–' ಎಂದು ಹೇಳಿ ತೋಟದತ್ತ ಹೆಜ್ಜೆಯೇನೋ ಇಟ್ಟೆ. ಆದರೆ ನಿಜಕ್ಕೂ ನನಗೆ ಪೇಚಾಟಕ್ಕಿಟ್ಟುಕೊಂಡಿತ್ತು. ಹೊಸಮನೆಯ ಅಂದಚೆಂದದ ವಿಚಾರ ; ತೋಟದಲ್ಲಿ ಹೆಚ್ಚೆನಿಸುವಷ್ಟು ಬಂದ ತೆಂಗಿನ ಫಲದ ವಿಚಾರ ; ಭಾಗೀರಥಿಯ ಸೀಮಂತದ ವಿಚಾರ ಏನೆಲ್ಲವನ್ನು ಸಮಾಧಾನವಾಗಿ ಅಡುಗೆ ಮನೆಯ ಮುಂದಗತ್ತಲೆಯಲ್ಲಿ, ಚಕ್ಕಲೆ–ಮಕ್ಕಲೆ ಕೂತು, ನಡುನಡುವೆ ಅಮ್ಮ ಕೇಳುವ ಪ್ರಶ್ನೆಗಳಿಗೆ ಮತ್ತೆ ಮೊದಲಿನಿಂದಲೂ ಪ್ರಾರಂಭಿಸಿ ಹೇಳಿ ಮುಗಿಸಿದಾಗ ಅಮ್ಮ– 'ಎಷ್ಟೆಂದರೂ ನೀನೂ ಅಪ್ಪಯ್ಯನ ಮಗ ಅಲ್ವೇನೋ ಕೃಷ್ಣಾ'– ಎಂಬುದನ್ನು ಕಿವಿಯಾರೆ ಕೇಳಿ ಎಷ್ಟೋ ದಿನದಿಂದ ಮಾತನಾಡಿರದ ಅಮ್ಮನೊಂದಿಗೆ ಮನದಣಿಯೆ ಮಾತಾಡಬೇಕೆಂದು ಬಯಕೆಯಾಗಿತ್ತು. ಆದರೆ ಬೆಳಿಗ್ಗೆಯಿಂದ ಹಾಗೆಂದುಕೊಂಡಾಗಲೆಲ್ಲ ನಾರಾಯಣನ ವಿಷಯ ಕಣ್ಮುಂದೆ ಕಟ್ಟಿ ಬಾಯಿಂದ ಮಾತುಗಳೇ ಬರದಾದಾಗ ಅಮ್ಮಳ ಮುಖವನ್ನು ನಾನಾಗೆ ತಪ್ಪಿಸಿಕೊಂಡೆ. ಅಲ್ಲದೆ ರಜೆ ಹಾಕಿ ಮನೆಯ ವಿಷಯಕ್ಕೆ ಬಂದಿರುವನೆಂಬ

ನಾರಾಯಣನ ಸಂಗತಿಯನ್ನು ಅಮ್ಮ-ಭಾಗೀರಥಿಯರ ಮನಸ್ಸಿಗೆ ಆಘಾತವಾಗದಂತೆ ಆದಷ್ಟು ನಯವಾಗಿ, ಆ ವಿಷಯ ಅವರಿಗರಿವಾಗುವ ಮೊದಲೇ ತಿಳಿಸಿಬಿಡಬೇಕಿತ್ತು. ನಾರಾಯಣನೇನೂ ತಾನಾಗಿಯೇ ಅದನ್ನು ಹೇಳುವ ಆಸಾಮಿಯಲ್ಲವಾದರೂ ಮಾತಿಗೆ ಮಾತು ಬಂದಾಗ ಕಚೇರಿಯ ಆಗುಹೋಗುಗಳನ್ನು ತಿಳಿಯುವ ಕುತೂಹಲದಲ್ಲಿ ಅಮ್ಮ-ಭಾಗೀರಥಿ ಇಬ್ಬರಲ್ಲಿ ಯಾರಾದರೂ ಆ ಬಗ್ಗೆ ಕೇಳಿದಾಗ- 'ಅದ್ಯಲ್ಲ ನಿಮ್ಗ ಯಾಕೆ ? ನಿಮ್ ಪಾಡಿಗೆ ನೀವು ಇರುದು ಕಲ್ತಕಳಿ !'- ಎಂದು ತಿರಸಿಪ್ಪ ಉತ್ತರವನ್ನು ಅವ ಕೊಟ್ಟರೂ ಕೊಟ್ಟನೆ. ಹೀಗಾಗದಂತೆ ಎಚ್ಚರ ವಹಿಸಬೇಕಾಗಿದ್ದರಿಂದ ಸರಸರನೆ ತೋಟದ-ಮನೆಯ ಕೆಲಸ ಮುಗಿಸಿ ಆದಷ್ಟು ಬೇಗನೆ ಮನೆ ತಲುಪಲು ನಿರ್ಧರಿಸಿದೆ. ಆ ಮುಂಚೆ ಅಂಥದ್ದೇನೂ ನಡೆಯದಿರಲಿ ಎಂದು ಮನಸ್ಸಿನಲ್ಲಿಯೇ ಪ್ರಾರ್ಥಿಸಿಕೊಂಡೆ.

ಸದ್ಯ ನಾನು ಮನೆ ಮುಟ್ಟಿದಾಗ ನಾರಾಯಣ ಇಲ್ಲದಿದ್ದುದರಿಂದ ಆ ಥರದ್ದೇನೂ ಆಗಿಲ್ಲವಲ್ಲ ಎಂದು ಸಮಾಧಾನವಾಯಿತು. ಆಘಾತಕ್ಕೆ ಅವರಿಬ್ಬರ ಮನಃಸ್ಥಿತಿ ಸಿದ್ಧಪಡಿಸಲು 'ನಾರಾಯಣನಿಗೆ ಕಛೇರಿಯಲ್ಲಿ ಕೆಲಸ ವಿಪರೀತವಂತೆ. ಅಲ್ಲಿನ ನೀರು-ಊಟ ಒಗ್ಗುವುದಿಲ್ಲವಂತೆ, ಪಾಪ, ಬಹಳ ಸೊರಗಿ ಹೋಗಿದ್ದಾನೆ....' ಹೀಗೆ ಅವನತ್ತ ಅವರನ್ನು ಒಲಿಸುವ ಮಾತನಾಡಿ, ಅವರು ಅದರ ಕುರಿತು ಹೆಚ್ಚು ಆಸಕ್ತಿ ತಾಳುವ ಮೊದಲೇ-'ಸಂಜೆ ಜೋಯಿಸರ ಮನೆಗೆ ಹೋಗೋಣವೇನೆ ಅಮ್ಮ. ವಾಸ್ತುವಿಗೆ ದಿನ ಗೊತ್ತು ಮಾಡಿ ಬರೋಣ. ಆದಷ್ಟು ಬೇಗ ಮುಗಿದರೆ ಒಳ್ಳೆಯದಲ್ವೇನೆ. ಹಾಗೆ ಹೊಸ ಮನೆ ನೋಡಿ ಬರುವಾಗ ದೊಡ್ಡಪ್ಪನ ಮನೆಗೂ ಹೋಗಿ ಬಂದು ಬಿಡೋಣ. ಅವರು ಸಾಧಿಸಿದರೂ ನಾವು ಹಾಗೆ ಮಾಡಲಿಕ್ಕಾಗುವುದಿಲ್ಲ. ಎಷ್ಟೆಂದರೂ ಅಪ್ಪಯ್ಯನ ರಕ್ತ ಹಂಚಿಕೊಂಡವರಲ್ಲ, ಏನಂತೀಯ ?' ಎಂದು ಬೇರೆ ಮಾತು ತೆಗೆದೆ. ಅಮ್ಮ-'ಅಯ್ಯೋ ಬಂಗಾರಿ, ಎಷ್ಟು ಸಹನೆಯೋ ನಿನಗೆ ? ಏನೆಲ್ಲ ಹಗೆ ಸಾಧಿಸಿದರೂ ನೀ ಮಾತ್ರ ದೊಡ್ಡವನಾಗಿ ನಡುಕೊಳ್ತೀಯಲ್ಲೋ. ಅಪ್ಪಯ್ಯನ್ನ ಹೆಸರು ಸಾರ್ಥಕಗೊಳಿಸುತ್ತೀಯೋ ನೀನು.... ' ಎಂದು ಬಾಯಿ ತುಂಬ ಕರೆದಳು. ನನಗೋ ಅಮ್ಮನಿಂದಲ್ಲದೆ ಮತ್ಯಾರಿಂದಲೂ ನನ್ನ ಕೆಲಸದ ಬಗ್ಗೆ ಹೊಗಳಿಸಿಕೊಳ್ಳುವುದು ಸೇರುವುದಿಲ್ಲ.

ಅವಳು ಇಷ್ಟು ದಿನ ಊರಲ್ಲಿಲ್ಲದಾಗ ನನ್ನನ್ನು ಹಾಗೆ ಮುದ್ದಿನಿಂದ, 'ರಮಿಸಿ' ಕರೆಯುವವರು ಯಾರೂ ಇಲ್ಲವಲ್ಲ ಎಂದು ಕೊರಗಿದೆನಲ್ಲ ? ನಾನಂದೆ 'ಎಲ್ಲಿ ಅಮ್ಮ ಇನ್ನೊಮ್ಮೆ ಹಾಗೆ ಕರೆದುಬಿಡೇ ನಂಗೂ ಇಷ್ಟವಾಗುತ್ತೆ !' ಅದಕ್ಕೆ ಅಮ್ಮ 'ನನ್ನ ಬಂಗಾರಿ, ಕಂದಾ, ಮುದ್ದು ಬಾರೋ ಇಲ್ಲಿ !' ಎಂದು ಲಟಿಗೆ ತೆಗೆದಳು. ನಾನು ತುಂಬಿದ ಮನಸ್ಸಲ್ಲಿ ಯೋಚಿಸಿದೆ 'ಅದ್ಯಾಕೆ ಒಮ್ಮೊಮ್ಮೆ ಈ ನಾರಾಯಣ ಅಮ್ಮಳಂಥ ಅಮ್ಮಂಗೂ ನೋವಾಗುವ ಹಾಗೆ ಮಾಡ್ತನೆ ? ಏನೇ ಆಗಲಿ, ಅವಳಿಗೆ ಬರುವ ನೋವೆಲ್ಲ ನನಗೇ ಬರಲಿ, ಈ ಸಲ ನಾರಾಯಣನಿಗೆ ಬುದ್ಧಿ ಹೇಳಬೇಕು. ಆಘಾತವಾಗದ ಹಾಗೆ ಅಮ್ಮಳಿಗೆ ಈ ಸುದ್ದಿ ತಿಳಿಸಬೇಕು !'

ಅದೇ ಸಂಜೆ ನಾನು–ಅಮ್ಮ, ಭಾಗೀರಥಿ–ಸುರೇಂದ್ರ ಹೊಸ ಮನೆಗೆ ಹೊರಡಲು ತಯಾರಾಗಿ ನಿಂತು ಸುಮಾರು ಹೊತ್ತು ಕಾದರೂ ನಾರಾಯಣ ಬರಲೇ ಇಲ್ಲ. ಆಮೇಲೆ ಬೇಸಾಯಗಾರ ನಾರಾಯಣನನ್ನು ಅರಸೀಕೆರೆಗೆ ಹೋಗುವ ಕಾಲು ದಾರಿಯಲ್ಲಿ ನೋಡಿದ್ದಾಗಿ ಹೇಳಿದ. 'ತುರ್ತು ಕೆಲಸವಿರ ಬೇಕು, ಅದಕ್ಕೇ ಹೋಗಿದ್ದಾನೆ' ಎಂದು ಆ ವಿಷಯ ಮರೆಸಿದ ನಾನು ಎಲ್ಲ ರನ್ನೂ ಜೋಯಿಸರ ಮನೆಗೆ ಹೊರಡಿಸಿದೆ.

০ ০ ০

ಜೋಯಿಸರ ಮನೆಯಲ್ಲಿ ಗೃಹಪ್ರವೇಶದ ದಿನ ಗೊತ್ತು ಮಾಡಿ ಕೊಂಡೆವು. ಅವರು ಬರುವ ಶುಕ್ರವಾರ ರೋಹಿಣಿ ನಕ್ಷತ್ರವಿರುವುದರಿಂದ ಅಂದು ಶಾಂತಿ ಮಾಡಿಸಿ ಮನೆಗೆ ಹೋಗಬಹುದೆಂದು ತಿಳಿಸಿದರು. ಬರುವಾಗ ತಿಮ್ಮಪ್ಪಯ್ಯ ದೊಡ್ಡಪ್ಪನವರ ಮನೆಗೂ ಹೋದೆವು. ದೊಡ್ಡಪ್ಪ ಬಹಳ ಸೊರಗಿ ಹೋದ ಹಾಗಿದ್ದರು. ಅವರ ಒಬ್ಬನೇ ಮಗ ಧೀರೇಂದ್ರ ಯಥಾ ಪ್ರಕಾರ ಮೈಸೂರಿನ ಸಾನಿ ಬೀದಿಯಲ್ಲಿ, ಹೊಟೇಲುಗಳಲ್ಲಿ ಹಣ ಪೋಲು ಮಾಡುವುದರಲ್ಲಿ ತೊಡಗಿದ್ದ ಸುದ್ದಿ ಹೇಳಿದರು. ಆದರೂ ಅಪ್ಪಯ್ಯ ತಮ್ಮ ಪಾಲಿಗೆ ಬಂದ ಮನೆ–ಜಮೀನು ಉಳಿಸಿಕೊಂಡಿದ್ದಕ್ಕಾಗಿ, ನಾವದನ್ನು ಹದ ಮಾಡಿ ಬೆಳೆ ತೆಗೆಯುತ್ತಿರುವುದಕ್ಕಾಗಿ ವಿನಾಕಾರಣ ದುರ್ಬೀಜದ ಮಾತ ನ್ನಾಡಿಯೇ ಅವರು ಕಳಿಸಿದ್ದು....

ಮನೆಗೆ ಬಂದಾದ ಮೇಲೆ ಅಮ್ಮ-ಭಾಗೀರಥಿ ಇಬ್ಬರೂ ಸೇರಿಕೊಂಡು ನನ್ನನ್ನು ತಪ್ಪಿಸಿಕೊಂಡು ಹೋಗಲಾರದಂತೆ ಮೂಲೆಗೆ ಹಾಕಿ ಮದುವೆಯ ಮಾತೆತ್ತಿದರು. ನಿನ್ನ ವಯಸ್ಸಿನವರಿಗೆ ಮದುವೆಯಾಗಿ, ಮಕ್ಕಳಾಗಿ ಆ ಮಕ್ಕಳಿಗೂ ಮದುವೆಯಾದರೂ ನೀ ಮಾತ್ರ ಗಣಪತಿಯ ಹಾಗಿರುತ್ತೀಯ ? ನಿನಗೀಗ ಮೂವತ್ತಿರಬೇಕು.... ಮುಂದಿನ ವರ್ಷ ನನಗೆ ಮೊಮ್ಮಗ ಬೇಕು ಅಂತ ಅಮ್ಮ ಅಂದರೆ–ಭಾಗಿ, ಸುರೇಂದ್ರ- ಹುಟ್ಟುವ ನಮ್ಮ ಮಗನಿಗೆ ಕೊಡಲು ನಿಮ್ಮ ಮಗಳು ಬೇಡವೆ ? ಎಂದು ಗೇಲಿ ಮಾಡಿದರು. ನನಗೆ ಏನೋ ಹೇಳಬೇಕೆನಿಸಿದರೂ ಸುಮ್ಮನಾದೆ. ಈ ಸಲ ಮದುವೆ ಬೇಡವೆನ್ನುವುದರಲ್ಲಿ ಯಾವ ಪುರುಷಾರ್ಥವೂ ಇಲ್ಲವೆನಿಸಿತು. ಆದರೂ ನಾರಾಯಣನ ಬದುಕೊಂದು ನೆಲೆಗೆ ಹತ್ತಿದ್ದರೆ ಚೆಂದವಿತ್ತೇನೋ ಅನಿಸಿತು.

ಹೇಳಿದೆ : ಮದುವೆಯೇನೋ ಸರಿ. ಅದಕ್ಕೊಂದು ಹುಡುಗಿಯಂತ ಬೇಡವೇ ?

'ನಾವೆಲ್ಲ ನೋಡಿಟ್ಟಿದ್ದೇವೆ. ತಾಳಿ ಕಟ್ಟುವುದೊಂದು ನಿನ್ನ ಕೆಲಸ—' ಅಂದಳು ಅಮ್ಮ. ಸರಿ ಬಿಡು, 'ನೀನು ನೋಡಿದ ಮೇಲೆ ಮುಗೀತು. ಆಕೆ ಎಷ್ಟೆಂದರೂ ನಿನ್ನ ಸೊಸೆ ಆಗುವವಳಲ್ಲ'— ಅಂತ ನಾನೆಂದೆ. ಅಷ್ಟರಲ್ಲಿ ಭಾಗೀರಥಿ ಅಂದಳು ; 'ಆದರೆ ಅಣ್ಣ ಹುಡುಗಿ ಕಡೆಯವರು ಮಾಧ್ವರು. ಆದರೆ ಬಹಳ ಒಳ್ಳೆಯ ಜನ....' ಆಕೆ ಹೇಳಿದ್ದು ನನಗೇನೂ ಅನಿಸಲಿಲ್ಲ. ತಟ್ಟನೆ ಒಮ್ಮೆ ಅಪ್ಪಯ್ಯ ಹೇಳಿದ್ದ ಮಾತು ನೆನಪಿಗೆ ಬಂತು : 'ಆನಂದ ತೀರ್ಥರೇನು ? ಶಂಕರಾಚಾರ್ಯರೇನು ಕೃಷ್ಣಾ ? ಇಬ್ಬರೂ ಅವರವರ ಕಾಲ ಧರ್ಮಕ್ಕೆ ತಕ್ಕ ಹಾಗೆ ಬೇರೆ ಬೇರೆ ಮಾತುಗಳಲ್ಲಿ ಒಂದೇ ಸಾರವನ್ನು ಹೇಳಿದರು. ಆದರೆ ಇದ್ಯಾವುದು ಮುಖ್ಯ ಅಲ್ಲವೇ ಅಲ್ಲ ಕಣೋ—ಬದುಕಲು ಸಂಸ್ಕಾರ ಮುಖ್ಯ. ಸುಮ್ಮನೆ ಕಚ್ಚಾಡುದು ಸಂಸ್ಕಾರ ಅಲ್ಲ....' ನನಗೆ ಆಶ್ಚರ್ಯವಾಗುತ್ತದೆ. ಅಪ್ಪಯ್ಯ ಎಂದೂ ಕಂಡದೇವರಿಗೆ ಹರಕೆ ಹೊತ್ತವರಲ್ಲ ; ಕಂಡ ಕಲ್ಲಿಗೆ ಕೈಮುಗಿದವರಲ್ಲ ಆದರೂ ಅವರೆಂದೂ ನಾಸ್ತಿಕರಾಗಿರಲಿಲ್ಲ. ಅವರ ದೇವರ ನಂಬಿಕೆಯೆಂದರೆ ಗದುಗಿನ ಭಾರತ ಓದಿ ಅದಕ್ಕೆ ಮಂಗಳಾರತಿ ಬೆಳಗುವುದು- ಅಕ್ಷರಗಳನ್ನು ಪೂಜಿಸುವುದು. ಸಂಜೆ ತಮ್ಮನ್ನು ಪ್ರೀತಿಸುವವರಿಗೆ ; ತಾವು ಪ್ರೀತಿಸುವವರಿಗೆ ಒಳ್ಳೆಯದಾಗಲಿ ಎಂದು ಒಂದು

ಗಂಟೆ ಧ್ಯಾನ ಮಾಡುವುದು.... ಅಂಥವರ ಮಗ ನಾನು. ನಾನೂ ಹಾಗಸ್ನು ವುದೇ ? ಅದಕ್ಕೇ ಭಾಗೀರಥಿಗೆ ಕೇಳಿದೆ : ಯಾರಾದರೇನೆ ? ಲಕ್ಷಣವಾದ ಹುಡುಗಿಯಲ್ಲ ವೇನೆ ? ನಮ್ಮ ಸಂಸಾರ ತೂಗಿಸುವ— ಅಮ್ಮನನ್ನು ನೋಡಿ ಕೊಳ್ಳುವ ಹಾಗಿದ್ದರೆ ಸಾಕು. ಅದಕ್ಕೆ ಅಮ್ಮ, ಭಾಗಿ, ಸುರೇಂದ್ರ- 'ಓಹೋ' ಎಂದು ಗೋಣು ಹಾಕಿದರು. ಹಾಗಿದ್ದರಾಯಿತು. ಅಂದೆ. ಮತ್ತೆ ಹುಡುಗಿಯನ್ನು ಬರುವ ವಾರದಷ್ಟೊತ್ತಿಗೆ ಕರೆಸು ಏರ್ಪಾಡು ಮಾಡು ಎಂದಳು ಅಮ್ಮ.

ಬೇಸಾಯಗಾರನಿಗೆ ಹುಡುಗಿ ಮನೆಯ ಗುರುತು ಕೊಟ್ಟು, ಒಂದೆಯೇ ಕರೆದುಕೊಂಡು ಬರಲು ಕಳಿಸಿಯಾಗಿತ್ತು. ಮನೆಯ ವಾಸ್ತುವಿಗೆ ಬೇಕಾದ ಸಾಮಾನು ಜೋಡಿಸಲು ಪ್ರಾರಂಭಿಸಿಯಾಗಿತ್ತು. ಸಮಾರಾಧನೆಗೆ ಇರಲೆಂದು ನಾನು ಅರಸೀಕೆರೆ ಹೋಗಿ ಒಂದಿಷ್ಟು ಹೊಸ ಬಟ್ಟೆಯನ್ನೂ ತಂದಾಗಿತ್ತು. ಇಷ್ಟೆಲ್ಲ ಆದರೂ ಮೂರು ದಿನಗಳಿಂದ ನಾರಾಯಣನ ಪತ್ತೆ ಇರಲಿಲ್ಲ. ಅರಸೀಕೆರೆಯಲ್ಲಿ ವಿಚಾರಿಸಿದಾಗ ಅಲ್ಲಿಯೂ ಸರಿಯಾಗಿ ಏನೂ ತಿಳಿದುಬರ ಲಿಲ್ಲ. ನಾನು ಇದೇ ಅವಕಾಶ ಉಪಯೋಗಿಸಿಕೊಂಡು ಅಮ್ಮ, ಭಾಗೀ, ಸುರೇಂದ್ರರಿಗೆ ಈಗಿರುವ ಕೆಲಸಕ್ಕಿಂತ ದೊಡ್ಡ ಕೆಲಸದ ಅವಕಾಶವಿರುವುದರಿಂದ ನಾರಾಯಣ ಸದ್ಯಕ್ಕೆ ಈಗಿನ ಕೆಲಸ ಬಿಟ್ಟಿದ್ದಾನೆ, ಕೆಲವು ದಿನ ಮನೆಯಲ್ಲಿಯೇ ಇರಬೇಕಾಗಬಹುದು. ನೀವ್ಯಾರು ಅವನಿಗೆ ಬೇಸರವಾಗದ ಹಾಗೆ ನೋಡಿ ಕೊಳ್ಳಿ ಎಂದು ಸೂಚ್ಯವಾಗಿ ಹೇಳಿದೆ. ಅವರಿಗೆಲ್ಲ ಅಂದುಕೊಂಡಷ್ಟೇನೂ ಆಘಾತವಾಗಲಿಲ್ಲವಾದರೂ ಅಮ್ಮ ಹಣೆಹಣೆ ಚಚ್ಚಿಕೊಂಡಳು. ಕಣ್ಣೀರು ಸುರಿಸಿದಳು. ಓದುವಾಗ ಮೈಸೂರಿನಲ್ಲಿದ್ದಾಗಲೊಮ್ಮೆ ಯಾರಿಗೂ ಹೇಳದೆ- ಕೇಳದೆ ಕಾಲೇಜು ಬಿಟ್ಟು ಹದಿನೈದು ದಿನಗಳ ಕಾಲ ಎಲ್ಲೋ ಹೋಗಿಬಿಟ್ಟಿ ದ್ದನ್ನು ಈ ಹಿಂದೆ ಅಮ್ಮಳಿಂದ ನಾನೆಷ್ಟೇ ಮುಚ್ಚಿಡಲು ಯತ್ನಿಸಿದರೂ ಸಾಧ್ಯ ವಾಗಿರಲಿಲ್ಲ. ಈಗಲೂ ಅಂಥದ್ದೇನೋ ಮಾಡಿಕೊಂಡಿದ್ದಾನೆ ನಾರಾಯಣ ಎಂಬುದು ಆಕೆಯ ಆತಂಕವಾಗಿತ್ತು. ನಾನಾಕೆಯನ್ನು ಆದಷ್ಟು ಸಮಾಧಾನ ಮಾಡಿದೆ. ಮಂಗಲಕಾರ್ಯವಿರುವಾಗ ಸುಮ್ಮನೆ ಮನಸ್ಸು ಕಹಿ ಮಾಡಿಕೊಳ್ಳ ಬೇಡ. ಎಲ್ಲ ಸರಿಹೋಗುತ್ತೆ- ಅಂದೆ.

ಕಡೆಗೆ ಗೃಹಪ್ರವೇಶದ ಹಿಂದಿನ ದಿನ ದಾವಣಗೆರೆಯ ಹುಡುಗಿ, ಆಕೆಯ

ತಂದೆ ಬಂದಿಳಿಯುವುದಕ್ಕೂ; ನಾರಾಯಣ ಬರುವುದಕ್ಕೂ ಸರಿಯಾಯಿತು. ಮರುದಿನ ಹಳ್ಳಿಯ ಹಿರಿಯರಿಗೆ; ದೊಡ್ಡಪ್ಪನ ಮನೆಯವರಿಗೆ ಕರೆದು ಗೃಹಪ್ರವೇಶ ಮುಗಿಸಿದೆವು. ಈ ಮನೆ ತನಗೆ ಸೇರಿದ್ದು ಎನ್ನುವ ಭಾವನೆ ಬರಲೆಂದು ನಾರಾಯಣನನ್ನೇ ಎಲ್ಲ ಕಾರ್ಯಕ್ಕೂ ಮುಂದೆ ಮಾಡಿದೆ. ಪುಣ್ಯಾ ವಾಚನಕ್ಕೂ ಅವನನ್ನೇ ಕೂಡಿಸಿದೆ. ಆಶ್ಚರ್ಯವೆಂದರೆ ನಾರಾಯಣ ತಾನೇ ಎಲ್ಲದರಲ್ಲೂ ಆಸಕ್ತಿ ವಹಿಸಿ ಪಾಲ್ಗೊಂಡ. ನನಗೆ ಅವನಲ್ಲಿನ ಬದಲಾವಣೆ ಕಂಡು ಖುಷಿಯಾಗಿತ್ತು.

ಅಂದಿನ ಸಮಾರಾಧನೆ ಮುಗಿದು ರಾತ್ರಿ ಎಲ್ಲರೂ ಊಟಕ್ಕೆ ಕೂತಾಗಲೇ ನಾನು ಆ ಹುಡುಗಿಯನ್ನು ಕಣ್ತುಂಬ ನೋಡಿದ್ದೆ! ಅವರು ಊರಿಗೆ ಬಂದದಿನ ರಾತ್ರಿಯಾಗಿತ್ತು. ಮೇಲಾಗಿ ಒಂದು ವಿಧದ ಸಂಕೋಚ ತುಂಬಿದ್ದರಿಂದ ಅವಳ ಮುಖವನ್ನೂ ಸರಿಯಾಗಿ ನೋಡಲಾಗಿರಲಿಲ್ಲ. ಇಂದಂತೂ ಬೆಳಗಿನಿಂದ ಆ ಈ ಕೆಲಸದಲ್ಲಿದ್ದುದರಿಂದ ಅವಳತ್ತ ಗಮನ ಹರಿಸಲು ಆಗಿರಲೇ ಇಲ್ಲ. ಹುಡುಗಿ ಲಕ್ಷಣವಾಗಿದ್ದಾಳೆ ಅನಿಸಿತು. ಆಕೆಯ ಮೈಬಣ್ಣ ಹೊಂಬಾಳೆಯಂತೆ. ಮೂಗಿಗೆ ಹೊಳೆಯುವ ಮೂಗೂತಿ ಇತ್ತು. ತುಸು ಪೀಚು ಪೀಚಾಗಿ ಕಾಣುತ್ತಿದ್ದ ಆಕೆ ನನಗಿಂತ ಹತ್ತು ವರುಷಗಳಷ್ಟು ಚಿಕ್ಕವಳಿರಬೇಕೆನಿಸಿತು. ಯಾಕೋ ಸ್ವಲ್ಪ ನಾಚಿಕೆಯೆನಿಸಿತು. ತುತ್ತು ಬಾಯಿಗಿಟ್ಟುಕೊಳ್ಳುವಾಗ ಆಗೀಗ ನನ್ನತ್ತ ಕದ್ದುನೋಡುತ್ತಿದ್ದ ಅವಳನ್ನು ಮತ್ತೊಮ್ಮೆ ನೋಡಿದೆ: ಮೊದಲಿಗಿಂತ ಚಂದಕಂಡಳು. ಅವಳ ತುಟಿಯ ಬಣ್ಣ ತುಂಬ ಆಕರ್ಷಕವಾಗಿ ಕಂಡರೂ, ಹಲ್ಲು ತುಸು ಉಬ್ಬು ಅನಿಸಿದರೂ; ಆಕೆ ಮತ್ತೆ ಮತ್ತೆ ನೋಡಿದಾಗ ಹೊಸದಾಗಿ ಕಂಡಳು. ಮುಂದೆ ನನ್ನ ನಾಲ್ಕು ಮಕ್ಕಳ ತಾಯಿಯಾಗಲಿದ್ದ, ಈ ಹುಡುಗಿ ತನ್ನ ಹೆಂಡತಿಯಾಗುತ್ತಾಳೆಂದರೆ ನಾಕಾರು ವರ್ಷದ ಹಿಂದೆ ಮದುವೆಯ ವಿಚಾರವನ್ನು ಕನಸಿನಲ್ಲಿಯೂ ಮಾಡಿರದಿದ್ದ ನಾನಂತೂ ನಂಬುತ್ತಿರಲಿಲ್ಲ. ಸುಭದ್ರೆ ನೋಡಲು ಸಂಕೋಚದ ಹುಡುಗಿಯಾದರೂ ಸಹನೆಯಲ್ಲಿ—ತಾಳ್ಮೆಯಲ್ಲಿ ದೇವತೆಯಂತೆ!

ಮುಂದೊಂದು ತಿಂಗಳಿಗೆ ಮದುವೆಯ ದಿನವನ್ನೂ ಅಮ್ಮ ಗೊತ್ತು ಮಾಡಿಬಿಟ್ಟಳು. ದಾವಣಗೆರೆ ನಮ್ಮ ಸಂಬಂಧಿಗಳು ಬರಲು ದೂರವೆಂದು ಮದುವೆಯನ್ನು ನಮ್ಮ ಹಳ್ಳಿಯಲ್ಲಿಯೇ ನಡೆಸಲು ಹುಡುಗಿಯ ತಂದೆ

ಅಭ್ಯಂತರವೇನೂ ಇಲ್ಲವೆಂದರು. ಈಗಿನ ಕಾಲದಂತೆ ಆಗೇನೂ ವಾಲಗ-ಮೈಕು ಸುಟ್ಟು ಸುಡುಗಾಡು ಇಲ್ಲದಿದ್ದರೂ ಸಂಬಂಧಿಕರು ಇರುವ ಅರಸೀಕರೆ, ಹಾಸನ, ಮೈಸೂರು ಹೀಗೆ ನಾನೇ ಖುದ್ದಾಗಿ ಹೋಗಿ ಕರೆದುಬರಬೇಕಿತ್ತು. ಚಕ್ಕುಲಿ-ಕೋಡುಬಳೆ, ಸಂಡಿಗೆ, ಮಜ್ಜಿಗೆ ಮೆಣಸಿನಕಾಯಿ ಎಂದು ಸಾಮಾನನ್ನು ಹರವಿಕೊಂಡು ಕೂಡುತ್ತಿದ್ದ ಅಮ್ಮ-ಭಾಗೀರಥಿಯರು ಕೇಳಿದ್ದನ್ನೆಲ್ಲ ತಕ್ಷಣ ಹಾಜರುಪಡಿಸಬೇಕಿತ್ತು. ಈ ಮಧ್ಯೆ ತೋಟದ ಕೆಲಸವನ್ನೂ ಚಾಚೂ ತಪ್ಪದಂತೆ ನಿರ್ವಹಿಸಬೇಕಿತ್ತು. ಬೇಸಾಯಗಾರರು ನಂಬಿಗಸ್ತ ಜನರಾದರೂ ನನಗೆ ಸಮಾಧಾನವಿಲ್ಲ. ಹಾಗೆಂದು ಶಾನುಭೋಗಿಕೆಯನ್ನು ಸಹ ಈ ಒಂದು ತಿಂಗಳು ಕಡೆಗಣಿಸುವಂತಿರಲಿಲ್ಲ. ಅಲ್ಲದೆ ನಮ್ಮ ಹತ್ತಿರದ ಪಾಲಕ್ಕಿಗೌಡರಂಥವರಿಗೆ ಮದುವೆಗೆ ಕರೆಯಲಾದರೂ ಆ ಹಳ್ಳಿಗಳನ್ನೆಲ್ಲ ಒಮ್ಮೆ ಸುತ್ತಲೇ ಬೇಕಿತ್ತು. ಅದಕ್ಕಾಗಿಯೇ ಮನೆಯ ಚಿಕ್ಕಪುಟ್ಟ ಜವಾಬ್ದಾರಿಯನ್ನು ; ತೋಟದ ಕೆಲಸವನ್ನು ನಾರಾಯಣ-ಸುರೇಂದ್ರರಿಗೆ ಒಪ್ಪಿಸಲು ನೋಡಿದೆನಾದರೂ ನಾರಾಯಣನ ಮೇಲೆ ಅಪನಂಬಿಕೆಯಿಲ್ಲದಿದ್ದರೂ ಉದಾಸೀನತೆಯಿಂದಾಗಿ ; ನಾರಾಯಣ ಹೊಸಬ ಮೇಲಾಗಿ ಮನೆಯಳಿಯ ಎನ್ನುವ ಕಾರಣಕ್ಕೆ ಅವರಿಗೆ ಕೆಲಸ ವಹಿಸಿದ್ದರೂ ನಾನೊಷ್ಟು ಗಮನವನ್ನು ಅತ್ತ ಹರಿಸುವುದು ಅವಶ್ಯವಾಗಿತ್ತು.

೦ ೦ ೦

ಸುಭದ್ರೆ ಮದುವೆಯಾಗಿ ಮನೆತುಂಬುವ ಹಿಂದಿನ ತಿಂಗಳು ತಿರುಗಾಟದಲ್ಲಿ, ಹುರುಪಿನಲ್ಲಿ ಆ ತಿಂಗಳು ಹೇಗೆ ಕಳೆಯಿತೆಂಬುದೇ ತಿಳಿಯಲಿಲ್ಲ. ಬಂಧುಗಳನ್ನೆಲ್ಲ ಕರೆದದ್ದಾದಮೇಲೆ ಅಮ್ಮ-ನಾನು, ಭಾಗೀ-ಸುರೇಂದ್ರ, ನಾರಾಯಣ ಒಟ್ಟಿಗೆ ಹೋಗಿ ಮೈಸೂರಲ್ಲಿ ಜವುಳಿ ಖರೀದಿ ಮಾಡಿದೆವು. ನಾವೆಲ್ಲರೂ ಹಳೆಯ ಕಾಲದವರಾದರೆ ನಾರಾಯಣ ಈ ಕಾಲದವನಲ್ಲವೇ – ಅವನಿಗೆ ಮೂಲಂಗಿ ಪ್ಯಾಂಟು, ಆ ಕಾಲಕ್ಕೆ ತಕ್ಕ ಫ್ಯಾಷನ್ನಿನ ಬಟ್ಟೆಗಳು. ಸುಭದ್ರೆಗೆ ರೇಷಿಮೆಸೀರೆ, ಭಾಗೀರಥಿಗೆ ರೇಷಿಮೆಸೀರೆ, ಅಮ್ಮಳಿಗೆ ರೇಷಿಮೆಸೀರೆ, ಸುರೇಂದ್ರರಿಗೆ ಬಿಳಿಪಂಚೆ-ಜರಿಪಟ್ಟೆಯ ಶಲ್ಯ....

ಮದುವೆಯ ದಿನ ಹಳ್ಳಿಗೆ ಹಬ್ಬ ಬಂದಂತಿತ್ತು. ಸುತ್ತೂರಿನ ಒಕ್ಕಲಿಗರು, ನಮ್ಮ ಹಳ್ಳಿಯವರು, ಹಾಸನ, ಗೋರೂರು, ಅರಸೀಕೆರೆಗಳಿಂದ ಬಂದ ಸಂಬಂಧಿಗಳು. ಮದುವೆ ನಡೆದದ್ದು ಹೊಸಮನೆಯಲ್ಲಿ. ಹಾಲಕ್ಕಿ ಗೌಡರು ಚಿತ್ರವಿಚಿತ್ರವಾಗಿ ಹಳ್ಳಿಯನ್ನು ಸಿಂಗರಿಸುವ, ಒಕ್ಕಲಿಗರ ಮದುವೆಯೂಟದ ಜವಾಬುದಾರಿ ವಹಿಸಿ–ಯಾವತ್ತೂ ತಲೆಯಮೇಲಿನ ರುಮಾಲು ಪಟ್ಟಿ ತೆಗೆಯದ ಮೂವರು ಅಣ್ಣ ತಮ್ಮಂದಿರು ಅಂದು ತೆಗೆದಿಟ್ಟು ಯಾರ ಬಾಯಿಂದ ಏನು ಬರುವುದೋ ಕಾದು ಅವರು ಕೇಳಿದ್ದನ್ನು ತರಿಸಿಕೊಡುವುದರಲ್ಲಿ ಮಗ್ನರಾಗಿದ್ದರು. ದಾವಣಗೆರೆಯಿಂದ ಬೀಗರನ್ನು ಕರೆತರಲು ಹಾಸನದ ಬಸ್ ಓನರ್‌ಗಳ ಬಳಿ ಮಾತನಾಡಿ ಟೆಂಪೋ ಒಂದನ್ನು ಒದಗಿಸಿಕೊಟ್ಟವರೂ ಅವರೇ ! ಇನ್ನುಳಿದ ಕೆಲಸಗಳನ್ನು ಸುರೇಂದ್ರ–ನಾರಾಯಣ ವಹಿಸಿಕೊಂಡಿದ್ದರು.

ಆ ರಾತ್ರಿ ಬಹುತೇಕ ಜನ ಹೊರಟುಹೋಗಿದ್ದರು. ತೀರ ಹತ್ತಿರದ ಬಳಗದವರು ಉಳಿದಿದ್ದರು ಮಾತ್ರ. ನಾನು ಹೊಸಮನೆಯ ಒಳಕೋಣೆಯಲ್ಲಿ ಸುಮ್ಮನೆ ಕುಳಿತಿದ್ದಾಗ ನಾರಾಯಣ ತುಂಬ ಅವಸರದಲ್ಲಿ ಒಳಗೆ ಬಂದ. ಆತನ ಮುಖ ಆತಂಕದಿಂದ ತುಂಬಿದಂತಿತ್ತು. ಏನೆಂದು ವಿಚಾರಿಸಿದೆ. ತನಗೆ ತುರ್ತಾಗಿ ಚಿಕ್ಕಮಗಳೂರಿಗೆ ಹೋಗಬೇಕೆಂದು ; ಹಿರಿಯ ಸಾಹೇಬರು ಹೇಳಿ ಕಳಿಸಿದ್ದಾರೆಂದು ತನಗೀಗ ಐನೂರರಷ್ಟು ಹಣ ಬೇಕೆಂದು ಕೇಳಿದ. ನನಗೆ ಎದೆ ಒಡೆದಹಾಗಾಯಿತು. ಆಗಿನ ಐನೂರು ಕಡಿಮೆ ಹಣವಾಗಿರಲಿಲ್ಲ. ಒಂದು ವರ್ಷದ ತೆಂಗುಬೆಳೆಯಷ್ಟು ! ನಾನು ಹಿಂದು–ಮುಂದು ಯೋಚಿಸದೆ, ಕಳೆದ ತಿಂಗಳು ಮಾರಿದ ತೆಂಗಿನ ಹಣವನ್ನು, ಮತ್ತೆ ತೆಂಗುಸಸಿ ತರಲು ಇಟ್ಟಿದ್ದರೂ ಅವನ ಕೈಯಲ್ಲಿಟ್ಟೆ. ಆದರೆ ಆ ರಾತ್ರಿಯೇ ಯಾರಿಗೂ ಹೇಳದಂತೆ ಅವನು ಮನೆಯನ್ನು ಬಿಟ್ಟುಹೋಗುತ್ತಾನೆಂದು ನಾನಂದುಕೊಂಡಿರಲಿಲ್ಲ. ಮಂಗಳ ಕಾರ್ಯ ನಡೆದ ಮನೆಯಲ್ಲಿ ಸೂತಕದ ಮನೆಯ ಛಾಯೆ ಮುತ್ತುವ ಹಾಗೆ ಅವನು ಮಾಡುತ್ತಾನೆಂದುಕೊಂಡಿರಲಿಲ್ಲ. ಅವನು ವಾಪಸ್ಸು ಬಂದದ್ದು ವರ್ಷಗಳ ನಂತರ ! ನನಗೆ ನಾಲ್ಕು ಮಕ್ಕಳು ಹುಟ್ಟಿದ ನಂತರ. ಅದೂ ಈ ಜಾ – ಹುಟ್ಟಿದ ನಂತರ.

o o o

ಆಕಾಶ ಮತ್ತಷ್ಟು ಕಪ್ಪಾಗಿ ಮೋಡಗಳನ್ನು ತುಂಬಿಕೊಂಡಿತು.

ಭರೋ ಎಂದು ಗಾಳಿ ಬೀಸಿ ಹಿಡಿಹಿಡಿ ಧೂಳನ್ನು ತೂರಿ ಹೋಯಿತು.

ಮರದಲ್ಲಿನ ಪಕ್ಷಿಗಳು ಗಾಳಿಗೆ ಚೆಲ್ಲಾಪಿಲ್ಲಿಯಾಗಿ ಕಿರುಚುತ್ತ ಬಾನಿಗೆ ಹಾರಿದವು.

ವಾತಾವರಣ ಒಂದು ಥರಹದ ಕೆಡುಕನ್ನು ಹೊಟ್ಟೆಯಲ್ಲಿಟ್ಟುಕೊಂಡು ಹೊರಹಾಕದೆ ಒದ್ದಾಡುವಂತಿತ್ತು.

ಇಷ್ಟಾದರೂ ಒಳಗೆ ಬರದ ಗಂಡನನ್ನು ಸುಭದ್ರಮ್ಮ ಮತ್ತೊಮ್ಮೆ ಹೊಸಿಲಬಳಿ ನಿಂತು ನೋಡಿದರು. ಮನಸ್ಸು ತಡೆಯದೆ ಹತ್ತಿರ ನಡೆದು ಬಂದರು–ಕೈಕಂಬಕ್ಕೆ ಆತು ನಿಂತರು. ಅಳಕುತ್ತ ದನಿ ಸರಿಪಡಿಸಿಕೊಂಡು–

"ಊಟಕ್ಕೆ ಬರುಲ್ಲವ ?" ಕೇಳಿದರು.

'ಇಲ್ಲ. ಎಲ್ಲರಿಗೂ ಮುಗಿಸಲು ಹೇಳು'

'ಅವರದೆಲ್ಲ ಆಯಿತು....'

'ಇರಲಿ. ನಾನು ಕೊನೆ ಬಸ್ಸಿನವರೆಗೆ ಕಾಯ್ತೀನೆ. ಅರಸೀಕೆರೆ ರೈಲು ಇನ್ನೇನು ಬಂದಿರುತ್ತದೆ. ಅಲ್ಲಿಂದ ಒಂದು ಗಂಟೆ–ಬಸ್ಸಲ್ಲಿ ಬರಲು, ನಾನು ಕಾಯುತ್ತೇನೆ, ಜಾಣೆ ಬರುತ್ತಾಳೆ....'

ಕೃಷ್ಣ ಸ್ವಾಮಿಗಳ ದನಿಯಲ್ಲಿ ಜಾಣೆ ಬಂದೇ ಬರುತ್ತಾಳೆ ಎನ್ನುವ ನಂಬಿಕೆಯಿದ್ದರೂ ಕೊನೆಯ ಮಾತನ್ನು ಒತ್ತಿ ಹೇಳುವಾಗ ಅವರ ಗಂಟಲು ಉಬ್ಬಿ ಬಂದು ಕಣ್ಣು ಹನಿ ಗೂಡಿದವು. ಸುಭದ್ರೆ ಕಣ್ಣೀರು ಗಮನಿಸದಿರಲೆಂದು ತಲೆ ಕೆಳಗೆ ಹಾಕಿ ಕುಳಿತರು. ಗಂಡ ಭಾವುಕರಾಗಿರುವುದನ್ನು ಗಮನಿಸಿದ ಸುಭದ್ರಮ್ಮ ಏನೂ ಮಾತಾಡಲು ತೋಚದೆ ಒಂದೆರಡು ನಿಮಿಷ ಹಾಗೇ ಮೌನವಾಗಿ ನಿಂತರು. ಬಿಸಿಯುಸಿರಿಟ್ಟು ಅಡುಗೆ ಮನೆಗೆ ತೆರಳುವ ಮೊದಲು ಮತ್ತೊಮ್ಮೆ ಕೇಳಿದರು–

'ಊಟಕ್ಕೆ ತಟ್ಟೆ ಹಾಕಲೇ ?'

ಕೊನೆಯ ಬಸ್ಸನ್ನು ಕಾಯುತ್ತ ಕುಳಿತಿದ್ದ ಕೃಷ್ಣಸ್ವಾಮಿ ಉತ್ತರವೆಂಬಂತೆ ತಮ್ಮಲ್ಲೇ ಗುನುಗಿಕೊಂಡರು.

'ಜಾಣೆ ಬರುತ್ತಾಳೆ....'

ಭಾಗ : ಎರಡು

# ಒಂದಿಷ್ಟು ಪೂರ್ವಾಪರಗಳು

---

ಮಲ್ಲಿಗೆಹಳ್ಳಿ ಕೃಷ್ಣಸ್ವಾಮಿಗಳು ಹೊಯ್ಸಳ ಕರ್ನಾಟಕ ಮತಸ್ಥರು. ಇವರ ಪೂರ್ವಜರು ಎಲ್ಲಿಂದ, ಯಾವಾಗ ಈ ಸ್ಥಳಕ್ಕೆ ವಲಸೆ ಬಂದರೆಂಬುದು ಸರಿಯಾಗಿ ಗೊತ್ತಿಲ್ಲ. ಇವರ ಮನೆದೇವತೆ ಬೇಲೂರು ಚೆನ್ನಕೇಶವನಾದರೂ ಅದೇನೋ ಇಂದಿಗೂ ಮನೆಯಲ್ಲಿ ದಿನವೂ ದೀಪ ಹಚ್ಚಿಡುವುದು ಶಿವನ ಹೆಸರಿಗೆ. ವರ್ಷಕ್ಕೊಮ್ಮೆ ಸುಗ್ಗಿ ಕಾಲದ ನಂತರ ಮಾರಿದ ಧಾನ್ಯದಿಂದ ಬಂದ ಹಣದಲ್ಲಿ ಧರ್ಮಸ್ಥಳದ ಮಂಜುನಾಥನಿಗೆ ಕಾಣಿಕೆಯನ್ನು ನಂಬಿಕೆಯಿರಲಿ, ಇಲ್ಲದಿರಲಿ ತಪ್ಪದಂತೆ ಕಳಿಸುತ್ತ ಬರುವುದನ್ನು ವಾಡಿಕೆ ಮಾಡಿಕೊಂಡಿದ್ದಾರೆ. ಕೃಷ್ಣ ಸ್ವಾಮಿಗಳ ಹಿರಿಯ ತಲೆಮಾರಿನ ಪೂರ್ವಿಕರಾರೋ ಈಗಿನ ಈ ಮಲ್ಲಿಗೆ ಹಳ್ಳಿಗೆ ಬಂದು ಸಂಸಾರದೊಂದಿಗೆ ಬೀಡು ಬಿಟ್ಟು ಉಸ್ಸಪ್ಪಾ ಎಂದು ಉಸಿರು ಬಿಟ್ಟಾಗ ಈ ಜಾಗ ಈಗಿನ ಹಾಗೆ ಹಳ್ಳಿಯೂ ಆಗಿರಲಿಲ್ಲ ; ಮನೆಗಳೂ ಇರಲಿಲ್ಲ. ಬದಲು ಈ ಭೂಮಿ ತನ್ನ ಮೈಯಿಡೀ ಉದ್ದುದ್ದ ಮರಗಿಡ ಗಳನ್ನು, ಹೊದಲು ; ಪೊದರುಗಳನ್ನು ತುಂಬಿಕೊಂಡು ಬಿಸಿಲಿನ ಕೋಲು ಗಳು ನೆಲಮುಟ್ಟದ ಹಾಗೆ ತಡೆದಿಟ್ಟುಕೊಂಡಿದ್ದ ದಟ್ಟಕಾಡಾಗಿತ್ತು. ಅಂಥ ಕಾಡಲ್ಲಿ ನರಮನುಷ್ಯರನ್ನು ; ಕುಡಿಯಲು ಬೊಗಸೆ ತುಂಬ ನೀರನ್ನು ಕಾಣ ಬೇಕಿದ್ದರೆ ಗಂಟೆಗಟ್ಟಲೇ ಕಾಡಿನ ಧೂಳಲ್ಲಿ ನಡೆಯಬೇಕಿತ್ತು. ಹಾಗೆಂದು

ಇದು ಮಲೆನಾಡೇನೂ ಆಗಿರಲಿಲ್ಲ. ಜತೆ ಜತೆಗೆ ಬಯಲುಸೀಮೆಯೂ ಆಗಿರಲಿಲ್ಲ. ಮಲೆನಾಡನ್ನು— ಬಯಲುಸೀಮೆಯನ್ನೂ ಇಬ್ಭಾಗಿಸುವ ರೇಖೆಯ ಹಾಗೆ: ನಡುವೆ ಈ ಕಾಡು ನಿಂತಿತ್ತು. ಬರುಬರುತ್ತ ಕಾಡಿನ ಹೊದಲು—ಪೊದರುಗಳನ್ನು ಸವರಿ, ಬದುಕುವ ಛಲವಿದ್ದವರು— ಕಾಡಿನೊಡನೆ ಬಾಳಲು ಸಿದ್ಧವಿದ್ದವರು ಈ ಮಣ್ಣಲ್ಲಿ ರುಜುವಿಟ್ಟು, ಮೊಳಕಾಲಿಗೆ ಪಂಚೆ ಕಟ್ಟಿ ಉತ್ಸಾಹದಿಂದ ಹಾದಿ ನಿರ್ಮಿಸಿ: ಆ ಹಾದಿ-ಬೀದಿಗಳ ಬದಿಯಲ್ಲಿ ಬಲೆ ಹೂಡಿದ್ದರು.

ಹಾಗೆ ಜತೆಯಲ್ಲಿ ಒಂದೆರಡು ಒಕ್ಕಲು ಮಕ್ಕಳ ಕುಟುಂಬ ಕರೆತಂದು ಹೊಂಗೆ, ಪತ್ರಿ, ಸಂಕತ್ರಿ, ಬಿದಿರುಮೆಳೆ ಮರಗಳ ಈ ಕಾಡಲ್ಲಿ ಬಂದಿಳಿದ ಪೂರ್ವಿಕರು ನಿಧಾನಕ್ಕೆ ಕುರಚಲು-ಪರಚಲು ಕುಯ್ದು ಹೊಲ ಮಾಡಿಕೊಂಡರು. ಇರಲು ನಾಲ್ಕು ಕಂಬ; ಎರಡು ತೊಲೆಗಳ ಮನೆಮಾಡಿಕೊಂಡರು. ಮಣ್ಣನ್ನು ಹದಮಾಡಿ ಮಳೆಗೆ ಕಾದು, ಬಿಡುವಿನ ವೇಳೆಯಲ್ಲಿ ಕಾಡಿನ ಹತ್ತೂ ಮರಗಳನ್ನು ಮುಟ್ಟಿ ನೋಡಿ; ತಟ್ಟಿ ನೋಡಿ ಅವುಗಳೊಂದಿಗೆ ಮಾತುಕತೆ ಬೆಳೆಸಿದರು. ಹೊಳೆಯಲ್ಲಿ ಮಿಂದು ಸಕಲಜೀವಿಗಳೂ ಬಾಳಿಬದುಕಲಿ ಎಂದು ಹೊಳೆ ದಡದಲ್ಲಿಯೇ ಕಲ್ಲಿಟ್ಟು— ಆ ಕಲ್ಲಿಗೊಂದು ಕಾಡ ಹೂವಿಟ್ಟು ಪ್ರಾರ್ಥಿಸಿದರು. ಕಾಡಲ್ಲೆಲ್ಲ ನಡೆದಾಡಿ ದಾರಿಗಳನ್ನು ನಿರ್ಮಿಸಿ— ಅಕ್ಕಪಕ್ಕದ ಹಳ್ಳಿಗಳನ್ನು ಕಂಡುಹಿಡಿದು ಅಲ್ಲಿನ ಜನರೊಂದಿಗೆ ಬೆರೆತರು. ಅನಕ್ಷರಸ್ಥರಿಗೆ ಮಳೆ ಬೆಳೆಯ ವಿಚಾರ ತಿಳಿಸಿ, ಕಾಗದ ಪತ್ರ, ಪಾಣಿ ಇತ್ಯಾದಿ ಬರೆದುಕೊಟ್ಟು ಅವರಿಗೆ ಬೇಕಾದವರಾದರು. ಪೂರ್ವಜರ ಈ ನಿಷ್ಕಾಮಕರ್ಮ ಅದು ಹೇಗೋ ಅಂದಿನ ಮೈಸೂರು ಒಡೆಯರ ಕಿವಿಗೆ ತಲುಪಿ, ಇವರಿಗೆ ಬುಲಾವು ಬಂತು. ಕುದುರೆಯೊಂದಿಗೆ ದಳವಾಯಿ ಬಂದಿಳಿದು ಇವರ, ಸೂರೆಂದು ಕರೆಯಿಸಿಕೊಳ್ಳುತ್ತಿದ್ದ ಮನೆಯುವರೆಗೂ ನಡೆದು ಬಂದು ವಿಷಯ ತಿಳಿಸಿದ. ಇದ್ದ ಹಾಗೇ ತನ್ನೊಂದಿಗೆ ಕುದುರೆ ಹತ್ತಿ ಮೈಸೂರಿಗೆ ಬರುವಂತೆ ಕರೆದ. ಸರಿ ಎಂದು ಗೋಣು ಹಾಕಿದ ಇವರೂ ಅಂಗವಸ್ತ್ರದ ಮೇಲೇ ಅರಮನೆಯ ಕರೆ ಮನ್ನಿಸಿ ಹೊರಟಿದ್ದರು.

ಮಹಾರಾಜರೆದುರು ವಿನಯದಲಿ, ತಮ್ಮ ಪಾಂಡಿತ್ಯ ಪ್ರದರ್ಶಿಸಬೇಕೆಂಬ ಅಹಂಕಾರವಿಲ್ಲದೆ, ಬಲ್ಲಷ್ಟು ವಿದ್ಯೆ ಹೇಳಿಕೊಂಡರು. ಮಹಾರಾಜ

ರಿಗೆ ಏನನ್ನಿಸಿತೋ ಅರಮನೆಯ ಉಗ್ರಾಣದ; ಲೆಕ್ಕಪತ್ರದ ಪಾರುಪತ್ಯೆ ಯನ್ನು ಇವರಿಗೆ ವಹಿಸಿಬಿಟ್ಟರು. ಇವರಿಗೋ: ದೊಡ್ಡಹುದ್ದೆ ಬಿಡು ವಂತಿಲ್ಲ; ಮೇಲಾಗಿ ದೊಡ್ಡವರ ಮಾತು. ಆದರೂ ತೂಕತಪ್ಪಿ ನಡೆಯ ಬಾರದು. ಕರ್ತವ್ಯದಲ್ಲಿ ಕಿಂಚಿತ್ತೂ ಲೋಪವಾಗಬಾರದು— ಜವಾಬ್ದಾರಿ ತುಸು ಹಿರಿದೇ. ನಡೆಸಿಕೊಂಡು ಹೋಗುವುದು ಹೇಗೆಂಬ ಚಿಂತೆಹತ್ತಿ ಕೊಂಡಿತು. ಆಯಿತು ಮಹಾಸ್ವಾಮಿ ಎಂದು ಹಳ್ಳಿಗೆ ಮರಳಿ ಬಂದರು. ದಿನವಿಡೀ ತಲೆಕೆಡಿಸಿಕೊಂಡು ಕಾಡಲ್ಲಿ ಸುತ್ತಿದರು. ಸುತ್ತು ಹತ್ತು ಕಡೆ ಹತ್ತಿರ ದಲ್ಲಿ ಆಪ್ತರಾರೂ ಇಲ್ಲದ್ದರಿಂದ ಯಾರಲ್ಲಿ ಸಲಹೆ ಪಡೆಯುವುದೋ ಗೊತ್ತಾಗ ಲಿಲ್ಲ. ಮನೆಯಲ್ಲಿನ ಹೆಣ್ಣನ್ನು ಕೇಳಬೇಕೇ". ಮೈಗೊಂದು ಲಪಾಟಿ ಸುತ್ತಿ ಕೊಂಡು, ಮಡಿಸ್ನಾನ ಮಾಡಿ ಹೊತ್ತು ಹೊತ್ತಿಗೆ ಅನ್ನ, ಗೊಜ್ಜು, ಪರ ಮಾನ್ನ, ಕೋಸುಂಬರಿಯೆಂದು ಒಲೆಯ ಮುಂದೆ ಮಾತ್ರ ಕೂತುಕೊಳ್ಳಲು ಗೊತ್ತಿರುವ ಹೆಣ್ಣು. ಯೋಚಿಸಿದರು; ನಿರ್ಧರಿಸಿದರು; ತಮ್ಮ ಜತೆ ಕರೆತಂದ ಬೇಸಾಯಗಾರ ಹಿರಿಕ ನೀಲಜ್ಜನನ್ನು ತಮ್ಮೊಡನೆ ಕರೆದೊಯ್ದು ವಿಷಯ ಹೀಗೆ, ಈಗೇನು ಮಾಡಲಿ? ನೀನೇ ಹೇಳು— ಅಂದರು. ನೀಲಜ್ಜ ಕಷ್ಟ-ನಷ್ಟ ತಿಳಿದವ. ಬದುಕನ್ನು ಕಂಡವ. ಹರೆಯದ ಬಿಸಿರಕ್ತದ ಈ ಬ್ರಾಹ್ಮಣ ಹುಡುಗ ಎಲ್ಲಿ ಹೆದರಿ ಜವಾಬುದಾರಿ ಬಿಟ್ಟು ಬಿಡುತ್ತಾನೋ ಎಂದು: ಅದಕ್ಕೇನು ಚಿಂತಿಸುವುದು. ಇನ್ನೆಷ್ಟು ದಿನ ಹೀಗೆ ಅಲೆಮಾರಿ ಯಾಗಿರುವುದು? ಹಿಂದಿನೂರಿನ ಕಹಿಘಟನೆ ಮರೆತು ಬಂದದ್ದು ಸ್ವೀಕರಿಸು ಮಗಾ, ಮನೆ-ಮಠ ತೋಟ ಅಂತ ಮಾಡಿ, ನಿನ್ನ ನಂಬಿ ಬಂದಿರುವವರಿಗೂ ಒಂದಿಷ್ಟು ಗತಿ ಕಾಣಿಸು ಎಂದು ಬುದ್ಧಿವಾದ ಹೇಳಿದ....

ಅರಮನೆಯ ನಂಟು ಬೆಳೆದಾದ ಮೇಲೆ ಬದುಕು ತುಸು ಸುಗಮ ವಾಯಿತು. ಆಗೀಗ ಮೈಸೂರಿನಿಂದ ವಂತಿಗೆ ವಸೂಲಿಗೆಂದು, ಹೊಸ ಆಚಾರ-ವಿಚಾರ ತಿಳಿಸುವುದಕ್ಕೆಂದೂ ಈ ಫಿರ್ಕಾದಲ್ಲಿ ಸುತ್ತಾಟ ನಡೆಸುವ ಅರಮನೆಯ ಜನ ಮಲ್ಲಿಗೆ ಹಳ್ಳಿಯಲ್ಲಿಯೇ ಬೀಡು ಬಿಡಬೇಕಾಗುತ್ತಿತ್ತು- ಯಾಕೆಂದರೆ ಎಲ್ಲ ಪ್ರದೇಶಕ್ಕೂ ಹೊಂದಿಕೊಂಡು ಈ ಹಳ್ಳಿ ಮಧ್ಯದಲ್ಲಿತ್ತು. ಆದರೆ ಹಲವೊಮ್ಮೆ ಹೆಚ್ಚು ಜನ ಬಂದಾಗ ಫಜೀತಿಯಾಗಿಬಿಡುತ್ತಿತ್ತು. ಪೂರ್ವಿಕರಿಗೆ ಹೆಂಡತಿ, ಒಂದು ಮಗುವಿನೊಂದಿಗೆ ಇರಲು ಸರಿಯಾದ ಜಾಗವಿ

ರಲಿಲ್ಲ. ಎಂಥದ್ದೋ ಒಂದು ನಾಲ್ಕು ಕಂಬದ–ಜೋರಾಗಿ ಗಾಳಿ ಬಂದರೆ ಅಲಗುವ ; ಮಳೆ ಬಂದರೆ ಕರಗುವ ಸೊಪ್ಪು ಮಾಡಿನ ಮನೆ. ಹಾಗೊಮ್ಮೆ ಯಾರೋ ಈ ವಿಷಯ ಅರಮನೆಯ ದಿವಾನರಿಗೆ ಮುಟ್ಟಿಸಿದರು. ದಿವಾನ ರಿಗೋ ಮೀಸೆ ಮರೆಯಲ್ಲೇ ಈ ಬ್ರಾಹ್ಮಣ ಯುವಕನ ಸಂಕೋಚ ನೋಡಿ ನಗು. ಅವರೇ ನಾಕಾರು ಸಿಬ್ಬಂದಿಯನ್ನು ಕಳಿಸಿ ಸರಿಯಾದ ಸೂರು ಕಟ್ಟಿ ಕೊಡಲು ಅಪ್ಪಣೆ ನೀಡಿ ಕಳಿಸಿದರು....

ಕೆಲವು ದಿನಗಳಿಗೆ ಮನೆಯೆಂದು ಕರೆಸಿಕೊಳ್ಳುತ್ತಿದ್ದ ಮನೆಯ ಪಕ್ಕವೇ ಇನ್ನೊಂದು ಮಜಬೂತು ಮನೆಯ ಭದ್ರಬುನಾದಿ ಬಿತ್ತು. ಎದ್ದು ನಿಂತಿತು. ಇವರ ಕಾರ್ಯ ವೈಖರಿ ಗಮನಿಸಿದ ಅರಮನೆಯವರು ಗೇಣಿಗೆಂದು ತುಸು ಹೆಚ್ಚು ಜಮೀನನ್ನೇ ಬಿಟ್ಟುಕೊಟ್ಟರು. ಈಗ ಪೂರ್ವಿಕರೊಡನೆ ಬಂದಿದ್ದ ಒಕ್ಕಲಿಗ ಕುಟುಂಬಗಳೂ ನಿರಾಳವಾದರು. ಪೂರ್ವಿಕರು ನಾಕೆಂಟು ದಿನ ಕ್ಕೊಮ್ಮೆ ಕುದುರೆಯ ಮೇಲೆ ಹಳ್ಳಿಗೆ ಬಂದು ಹೋಗುತ್ತಿದ್ದರೂ ಅವರ ಗೈರು ಹಾಜರಿಯಲ್ಲಿ ಬೇಸಾಯಗಾರರು ನೆಲವನ್ನು ಹಸಿರಾಗಿಸಿ, ರಾಗಿ–ಗೋಧಿ ನಳ ನಳಿಸುವಂತೆ ಮಾಡಿದರು. ಹಾಗೆಯೇ ಸಂಸಾರ ಬೆಳೆಯಿತು, ಪೂರ್ವಿಕರದು ಒಕ್ಕಲಿಗರದು. ಒಂದೆರಡಿದ್ದ ಬೇಸಾಯಗಾರರ ಮನೆ ಕಾಲಕ್ರಮದಲ್ಲಿ ನಾಕೆಂಟಾದವು. ಅಲ್ಲಿಯವರೆಗೂ ಹೆಸರೇ ಕಾಣದಿದ್ದ ಕಾಡಿನ ನಡುವೆ– ಪೊಳೆಯ ಪಕ್ಕದಲ್ಲಿದ್ದ ಈ ನೆಲ 'ಮಲ್ಲಿಗೆ ಹಳ್ಳಿ' ಎಂದು ಪೂರ್ವಿಕರಿಂದ, ಕರೆಯಿಸಿಕೊಂಡಿತು. ಕಾಡಲ್ಲಿ ಬೆಳದಿಂಗಳ ಹಾಗೆ ಅರಳಿ ಘಮಘಮಿಸುತ್ತಿದ್ದ ಕಾಡು ಮಲ್ಲಿಗೆ ಹೂ ಪೊದೆಗಳ ಪಕ್ಕದಲ್ಲಿದ್ದ ಈ ಹಳ್ಳಿ–ಮಲ್ಲಿಗೆ ಹಳ್ಳಿ ಆದಂತೆ ಹರದಾರಿ ದೂರದಲ್ಲಿ ಮುಂದೆ ಸಂಪಿಗೆ ವನವಿರುವೆಡೆ ಸಂಪಿಗೆ ಹಳ್ಳಿ, ಕೇದಿ ಗೆಯ ಕಡುಘಾಟು ತುಂಬಿಕೊಂಡ ಪ್ರದೇಶಕ್ಕೆ–ಕೇದಿಗೆವನಹಳ್ಳಿ ಹೀಗೆ.... ಹೆಸರುಗಳು ಹುಟ್ಟಿಕೊಂಡವು. ಮಲ್ಲಿಗೆ ಹಳ್ಳಿಯ ಹತ್ತಿರದ ಬೆಟ್ಟವನ್ನೇರಿ ತುದಿಗೆ ನಿಂತರೆ ಈ ಹಳ್ಳಿಗಳು ಅವುಗಳಿಗೆ ಹೆಸರು ಕೊಟ್ಟ ಹಾಗೆ ಮನೆಗಳು, ನಾಡು ಹಂಚಿನ ಕೆಂಪು ತಲೆಯಲ್ಲಿ, ಬಿಳಿ ಸುಣ್ಣದ ಗೋಡೆಗಳಲ್ಲಿ ಮಲ್ಲಿಗೆಯ ಹಾಗೂ, ಸಂಪಿಗೆಯ ಹಾಗೂ ಕಾಣುತ್ತಿದ್ದವು, ಈಗಲ್ಲ, ಹಿಂದೆ. ಅದು ಆಗಿ ನವರ ದೃಷ್ಟಿ; ಸೃಷ್ಟಿ. ಆದರೆ ಈಗ ಅವೇ ಹಳ್ಳಿಗಳು ಅಡ್ಡತಿಡ್ಡ ಬೆಳೆದು ಈಗಲ್ಲಿಂದ ನೋಡಿದರೆ ಗಜಿಬಿಜಿ ಪೊದೆಯ ಹಾಗಿವೆ, ಇರಲಿ.

ಹಾಗೆ ಎಲ್ಲಿಂದಲೋ ನೂರಾರು ಗಾವುದ ನಡೆದು ಬಂದು ಈ ಕಾಡಲ್ಲಿ ಹಳ್ಳಿ ಕಟ್ಟಿ–ಆ ಹಳ್ಳಿಯ ಬಳ್ಳಿಯನ್ನು ಅರಮನೆಯವರೆಗೂ ಹಬ್ಬಿಸಿದ ಪೂರ್ವಿಕರ ಹೆಸರು–ವೆಂಕಟಪ್ಪಯ್ಯ. ಅವರು ಕೃಷ್ಣಸ್ವಾಮಿಗಳ ತಂದೆ ನರಸಯ್ಯನವರ ಮುತ್ತಾತಂದಿರು ! ಅವರಿಂದ ಪ್ರಾರಂಭವಾದ ಅರಮನೆಯ ನಂಟು ಮುಂದೆಯೂ ಬೆಳೆಯಿತು. ಅವರ ಮಗನಿಗೆ–ಅವರವರ ಮಗನಿಗೆ ! ಮುಂದೆ ಅವರ ತಲೆಮಾರಿನ ಸೇವೆ ಮೆಚ್ಚಿ 'ರಾಜಸೇವಾಸಕ್ತ' ಎಂಬ ಬಿರುದು ಸಹ ಬಂದಿತು. ನರಸಯ್ಯನವರ ತಂದೆ ತಿಮ್ಮಪ್ಪಣ್ಣ ಭಟ್ಟರವರೆಗೂ ಅರಮನೆಯ ನಂಟು ಚೆನ್ನಾಗಿಯೇ ಇತ್ತಾದರೂ ಬರುಬರುತ್ತಾ ಕುಂದಿದ ಒಡೆಯರ ವರ್ಚಸ್ಸು, ಹೆಚ್ಚಿದ ಬ್ರಿಟೀಷರ ಅಧಿಕಾರ, ಸೂಕ್ಷ್ಮ ಸಂಬಂಧಗಳನ್ನು ಕಡಿದುಕೊಳ್ಳುತ್ತ ನಡೆದ ಹಳ್ಳಿಗಳ ವಾತಾವರಣ ಇದರೊಂದಿಗೆ ತಿಮ್ಮಪ್ಪಣ್ಣನವರಿಗೆ ಆಗದ ಯಾರೋ ಇವರ ಬಂಧುಗಳೇ ಅರಮನೆಯ ಕಂಬಕ್ಕೆ ಉಸುರಿದ್ದು ಹಿನ್ನೆಲ್ಲ ಸೇರಿ ಸಂಬಂಧ ಹದಗೆಟ್ಟಿತು. ಆದರೂ ತಿಮ್ಮಪ್ಪಣ್ಣ ಬದುಕಿರುವವರೆಗೆ ಅವರು ಯಾವತ್ತಿನಂತೆ ಆಗೀಗ ಅರಮನೆಗೆ ಭೇಟಿಕೊಟ್ಟು, ಹಳೆಯ ತಲೆಮಾರಿನವರ ಕಾಲದಲ್ಲಿ ಬರೀ ಗೇಣಿಗೆಂದು ಕೊಟ್ಟಿದ್ದ ಭೂಮಿ ಈಗ ಇವರ ಮನೆತನದ ಹೆಸರಲ್ಲಿ ಪಾಣಿಪಟ್ಟಾ ಆಗಿ, ಇವರ ಸ್ವಂತದ್ದೇ ಆಗಿದ್ದರೂ ವಂತಿಗೆ ಕೊಡುತ್ತ ಬಂದಿದ್ದರು. ಮಹಾರಾಜರದೂ ಈಗ 'ಮುಗಿದ ಅರಮನೆಯಲ್ಲಿ ರಾಜಠೀವಿ' ಅನ್ನುವಂತಿತ್ತು. ಹಳೆಯ ಕುಹಕ ಅವರು ಮರೆತಿದ್ದರು. ಮತ್ತೊಮ್ಮೆ–ಅರಮನೆಯಲ್ಲೀಗ ನೋಡಿಕೊಳ್ಳುವಷ್ಟು ಉಗ್ರಾಣ, ಸಿಬ್ಬಂದಿ, ಜಹಗೀರು ಉಳಿದಿರದಿದ್ದರೂ ಔಪಚಾರಿಕವಾಗಿ ಪಾರು ಪತ್ಯೆದಾರಿಕೆಗಾಗಿ ಕರೆದರು. ನಿಜಸ್ಥಿತಿ ಅರಿವಿದ್ದ ತಿಮ್ಮಪ್ಪಣ್ಣನವರು ನಯವಾಗಿಯೇ ಅವರ ಆಹ್ವಾನ ಬೇಡವೆಂದೂ ; ಈಗ ತಮ್ಮ ವಂಶಕ್ಕೆ ದಯಪಾಲಿಸಿರುವ ಶಾನುಭೋಗಿಕೆ ಸಾಕೆಂದೂ ಕೈಮುಗಿದು ಹೊರಬಂದರು. ಈಗಾಗಲೇ ಇವರ ವಂಶದ ಕೀರ್ತಿ, ಶಾನುಭೋಗಿಕೆಯ ಪ್ರತಿಷ್ಠೆ ಸುತ್ತೂರುಗಳಲ್ಲಿ ಅಲ್ಲದೆ–ಅರಸೀಕೆರೆ, ಗೊರೂರು, ದೇವನಹಳ್ಳಿಯ ಫಿರ್ಕಾದವರೆಗೆ ಹಬ್ಬಿತ್ತು. ಹಾಗೆ ನೋಡಿದರೆ–ಶಾನುಭೋಗಿಕೆ ನೀಗಿಸಿಕೊಂಡು ; ಜಮೀನಿನತ್ತ ಗಮನಕೊಡುವಲ್ಲಿ ಅವರ ವೇಳೆ ಸವೆದು ಹೋಗುತ್ತಿತ್ತು....

ತಿಮ್ಮಪ್ಪಣ್ಣನವರ ನಂತರ ಸಹಜವಾಗಿಯೇ ಅವರ ಹಿರಿಯ ಮಗ

ಅಂದರೆ ಕೃಷ್ಣಸ್ವಾಮಿಗಳ ತಂದೆ ನರಸಯ್ಯನವರಿಗೆ ಶಾನುಭೋಗಿಕೆ ಬಂತು. ಆಗ ಅವರ ತಮ್ಮಂದಿರು, ತಿಮ್ಮಪ್ಪಯ್ಯ, ಗೋವಿಂದಯ್ಯ ತಕರಾರು ತೆಗೆದರು. ಶಾನುಭೋಗಿಕೆ ಅವನಿಗೆ ಹೋಗುವುದಾದರೆ ಒಂದು ಪಾಲು ಆಸ್ತಿ ನಮಗೆ ಜಾಸ್ತಿ ಬರಲಿ ಅಂದರು. ನರಸಯ್ಯನವರು ಒಂದು ಮಾತನ್ನೂ ಹೆಚ್ಚಿಗೆ ಆಡದೆ ಮುಕ್ಕಾಲು ಆಸ್ತಿ ಅವರಿಗೆ ಬಿಟ್ಟುಕೊಟ್ಟರೂ ಸಹ ಮುಂದೆ ಗೋವಿಂದಯ್ಯ ಮೈಸೂರು ಸೇರಿ ತಾನೇ ಖುದ್ದು ತನ್ನ ಆಸ್ತಿ ಹಾಳುಗೆಡವಿದ್ದರೆ, ಹಳ್ಳಿಯಲ್ಲಿಯೇ ಇದ್ದ ತಿಮ್ಮಪ್ಪಯ್ಯನ ಮಗ ಧೀರೇಂದ್ರ ಇವರ ಆಸ್ತಿ ಕರಗುವಂತೆ ಮಾಡತೊಡಗಿದ್ದ : ಇದು ಕೃಷ್ಣಸ್ವಾಮಿಗಳ ಪೂರ್ವಿಕರ ಇತಿವೃತ್ತಾಂತ !

# ಗೌರಿ ದುಃಖ—ನಡೆಯದ ಪ್ರಸ್ತ

ಮದುವೆ ಮನೆಯ ಚಪ್ಪರ, ತಳಿರು ತೋರಣ ಇನ್ನೂ ಬಾಡಿರಲಿಲ್ಲ. ಮಗನ ಮದುವೆ ಪ್ರಸ್ತದೂಟದ ರುಚಿಯಿನ್ನೂ ನಾಲಿಗೆಯಿಂದ ಮಾಸಿರಲಿಲ್ಲ. ದೂರದಿಂದ ಬಂದ ಬಂಧು-ಬಳಗದವರೊಂದಿಗೆ ಎಲೆಯಡಿಕೆ ಹಾಕುತ್ತ-ಕೈ ಮೈ ಮುಟ್ಟಿ ಕುಶಾಲು ಮಾಡಿರಲಿಲ್ಲ; ಪಂಟುಹೊಡೆದಿರಲಿಲ್ಲ. ಅಷ್ಟೇಕೆ ಮದುಮಗಳು ಮುಂಜಾನೆ ಹಸೆಮಣೆಯ ಮೇಲೆ ಕೂತಾಗ ಮುಡಿದ ಮಲ್ಲಿಗೆ ಮೊಗ್ಗುಗಳು ಸಹ ಇನ್ನೂ ಪೂರ್ಣವಾಗಿ ಅರಳಿರಲಿಲ್ಲ. ಇಂಥ ಸಮಯದಲ್ಲಿ ಜೀವಕ್ಕೆ ಅತಿನೋವೆನಿಸುವ ವಿಷಯ ತಿಳಿದರೆ ಹೇಗಾಗಿರಬೇಡ? ಬಳಗದ ಹೆಂಗಸರೊಂದಿಗೆ ನಗುತ್ತ ಕಲೆಯುತ್ತ ಮಾತಾಡುತ್ತ ಕೂತ ಗೋದಾವರಿ ಬಾಯಿಯನ್ನು ಕೃಷ್ಣ– 'ಅಮ್ಮ ಒಂದ್ನಿಮಿಷ ಇಲ್ಲಿ ಬಾರೆ'- ಎಂದು ಕರೆದಾಗ ಅನುಭವವಿಲ್ಲದ ಹುಡುಗ ತುಸು ಹೆದರಿರಬೇಕೆಂದು, ಸಮಾಧಾನಪಡಿಸಿದರೆ ಸರಿಹೋಗುತ್ತಾನೆಂದು ಗೋದಾವರಿಬಾಯಿ– ದೊಡ್ಡದನಿಯಲ್ಲಿ: 'ಅಯ್ಯೋ ಏನಾಯ್ತೋ ಕಂದಾ–' ಎಂದು ಗುಂಪು ಬಿಟ್ಟು ಎದ್ದು ಬಂದಿದ್ದರು. ಕೃಷ್ಣ ಏನನ್ನೂ ಮಾತಾಡದೆ ಹಿತ್ತಲಿಗೆ ಕರೆದೊಯ್ಯತೊಡಗಿದಾಗ ಅಸ್ಪಷ್ಟ ಅನುಮಾನ ಕಾಡತೊಡಗಿದರೂ ಯಾವುದೋ ಗಹನವಿಚಾರ ಹೇಳುವುದಿರಬೇಕೆಂದು ಸುಮ್ಮನೆ ಅವನ ಹಿಂದೆ ನಡೆದಿದ್ದರು.

'ಅಮ್ಮ, ಸ್ವಲ್ಪ ಸಮಾಧಾನವಾಗಿರೇ. ಅಂಥದ್ದೇನೂ ಆಗಿಲ್ಲ. ಆದರೆ

ಹಣದ ವಿಚಾರ ಅಂತ ಹೇಳುತ್ತಿದ್ದೇನೆ. ನಿನ್ನ ಮುಂದೆ ಹೇಳದೆ ಸಮಾಧಾನ ಆಗುಲ್ಲ ಅನ್ನೊ ಕಾರಣಕಷ್ಟೇ....'

-ಎಂದು ಕೃಷ್ಣ ಮಾತು ಪ್ರಾರಂಭಿಸಿದಾಗಲೇ ಮೃದುಮನಸ್ಸಿನ ಹೆಂಗುಸಾದ ಗೋದಾವರಿಬಾಯಿಗೆ ದುಃಖ ಕಟ್ಟೆ ಒಡೆದು ಕಣ್ಣಾಲಿಯಲ್ಲಾಗಲೇ ನೀರು ಹನಿಗೂಡಿದ್ದವು. ಕೃಷ್ಣ ಎಲ್ಲವನ್ನೂ ವೈಶಾಖಿ ಹಸುವಿನ ಕೊರಳು ತೀಡುತ್ತ, ಗೋಡೆಗೆ ಮುಖ ಮಾಡಿ ಹೇಳಿ ಮುಗಿಸಿ :

'ದುಡ್ಡು ಹೋದರೂ ಚಿಂತೆಯಿಲ್ಲ. ಅವನಿಗೆ ತುರ್ತುಕೆಲಸವಿದ್ದು ಹೋಗಿದ್ದರೂ ಚಿಂತಿಲ್ಲ, ಆದರೆ ನಾಣಿ ವಾಪಸ್ಸು ಬಂದರೆ ಸಾಕು.... ಆದರೂ ನನಗೇಕೋ ಅನುಮಾನವಾಗ್ತಿದೆಯೇ. ಈ ರಾತ್ರಿಯಲ್ಲಿ ಅವೆಂಥ ಸಾಹೇಬ ಹೇಳಿ ಕಳಿಸುಕ್ಕೆ ಸಾಧ್ಯಾಂತ ? ಏನು ? ಹಾಗಿದ್ದಿದ್ದರೆ ನಸುಕಲ್ಲಿ ಎದ್ದು ಹೋಗಲು ಆಗ್ತೀರಲಿಲ್ಲವೇನೆ ? ನನ್ನ ಮಂಕು ಬುದ್ಧಿ ನೋಡು- ನಂಗೆ ಹೊಳೀಲೇ ಇಲ್ಲ. ಇಲ್ಲದಿದ್ದರೆ ಜೀಸಾಯಗಾರ ಕಾಡಜ್ಜನನ್ನಾದರೂ ಕಳಿಸ ಬಹುದಿತ್ತು- ಅವನ ಹಿಂದೆ, ಏನು ಮಾಡುತ್ತಾನೋ ನೋಡುಂತ. ಇರ್‍ಲಿ ಬಿಡು- ಎಲ್ಲಿ ಹೋಗುತ್ತೆ ಹುಚ್ಚು ಹುಡುಗ. ವಾರಒಪ್ಪತ್ತು ಬಿಟ್ಟು ಬಂದಾನು.... ಆದರುನೂ.... ಅಮ್ಮ....' -ಅಂತ ಮಾತು ಮುಗಿಸುವ ಮೊದಲೇ ಗೋದಾವರಿಬಾಯಿ ಗಂಡ ಸತ್ತಾಗಲೂ ಅಷ್ಟೊಂದು ಧೃತಿಗೆಡದ ವರು ಕುಸಿದು ಕೂತು ಹೋ ಎಂದು ಅಳತೊಡಗಿದರು. ಈಗ ಸಮಾಧಾನ ಪಡಿಸುವ ಸರದಿ ಕೃಷ್ಣನದಾಯ್ತು. ನಿಜವೆಂದರೆ ಅಮ್ಮನ ಬಳಿ ಹೇಳಿ ನಿರಾಳ ವಾಗಬಹುದೆಂದು ಬಂದಿದ್ದವನು- ಅಮ್ಮ ಎಷ್ಟು ಸೂಕ್ಷ್ಮ ಅಂತ ಗೊತ್ತಿದ್ದೂ ಸಹ ತಾನು ಈ ವಿಷಯ, ಈ ಸಂದರ್ಭದಲ್ಲಿ ಆಕೆಗೆ ಹೇಳಬಾರದಿತ್ತು ಎಂಬ ಹಳಹಳಿಕೆ ಸುರುವಾಯಿತು, ಎಷ್ಟು ಹೊತ್ತಾದರೂ ಅವರ ಅಳುವಿನ ದನಿ ನಿಲ್ಲದಾದಾಗ ಹರಟೆ ಕೊಚ್ಚುತ್ತಿದ್ದ ಹೆಂಗಸರೆಲ್ಲ ಎದ್ದು ಬಂದು ವಿಷಯ ತಿಳಿದು ಗುಜುಗುಜು ಆರಂಭಿಸಿದರು. ಸುರೇಂದ್ರ-ಭಾಗೀರಥಿ ಸಹ ಏನೂ ತೋಚದೆ ಸುಮ್ಮನೆ ನಿಂತುಬಿಟ್ಟರು. ಕುಸಿದು ಕೂತ ಅಮ್ಮನನ್ನು ಪಡಸಾಲೆಗೆ ಕರೆತಂದ ಕೃಷ್ಣನಿಗೆ ಈ ಗದ್ದಲದಲ್ಲಿ ಹೊಸದಾಗಿ ಈ ಮನೆಯ ಹೊಸಿಲು ತುಳಿದ ಹುಡುಗಿ ಎಲ್ಲಿ ತಮ್ಮ ಮನೆಯ ಬಗ್ಗೆ ನಂಬಿಕೆ ಕಳೆದುಕೊಳ್ಳುತ್ತಾಳೋ; ಎಲ್ಲಿ ಬೀಗರು ತಪ್ಪು ತಿಳಿಯುತ್ತಾರೋ ಅನಿಸಿದ್ದೇ-ಭಾಗೀರಥಿಯನ್ನು ಕರೆದು

ಅಮ್ಮಳನ್ನು ಸಾವಧಾನ ಮಾಡು ಎಂದು ಹೇಳಿ, ಸುರೇಂದ್ರನೊಂದಿಗೆ ಬೀಗರ ಬಳಿ ಹೊರಟ. ಪುಣ್ಯಕ್ಕೆ ಕೆಲವು ಹೆಂಗಸರಿಗೆ ಬಿಟ್ಟರೆ ಗಂಡಸರ್‍ಯಾರಿಗೂ ಈ ವಿಷಯ ತಿಳಿದಿರಲಿಲ್ಲ. ಕೆಲವರಾಗಲೇ ದುಕ್ಕೋತದ ಸಿಹಿಯೂಟ ಉಂಡು ಉದ್ದಕ್ಕೆ ಹಾಸಿದ್ದ ಏಕ ಜಮಖಾನೆಯ ಮೇಲೆ ಮಲಗಿ ನಿದ್ರಿಸುತ್ತಿದ್ದರು. ಕೃಷ್ಣನಿಗನಿಸಿತು: ಇನ್ನುಳಿದದ್ದು ಆ ಹುಡುಗಿ– ಅಷ್ಟೇ. ಸರಿಯೆಂದು ಸುರೇಂದ್ರನಿಗೆ ಅಮ್ಮಳನ್ನು ಬೆಳಿಗ್ಗೆ ಕಾಣುವೆ, ನೀವೆಲ್ಲ ಹೋಗಿ ನಿದ್ರಿಸಿ, ಇವತ್ತೊಂದು ದಿನ ಭಾಗೀರಥಿಯನ್ನು ಅಮ್ಮನ ಬಳಿಯೇ ಮಲಗಿಸು ಎಂದು ಹೇಳಿ, ಹೊಸಕೋಣೆಗೆ ಹೋದರೆ ಪಾಪ, ಹುಡುಗಿ, ಮೊಳಕಾಲಿಗೆ ಗೋಣು ಕೊಟ್ಟು ತೂಕಡಿಸುತ್ತಿದ್ದಳು. ಬೆಳಿಗ್ಗೆಯಿಂದ ಹೋಮ–ಹವನವೆಂದು ಹೊಗೆ ಯಲ್ಲಿದ್ದುದ್ದಕ್ಕೆ ಕಣ್ಣು ಕೆಂಪಾಗಿದ್ದವು. ತುಸು ನೆಗಡಿಯೂ ಆದವಳಂತೆ ಆಗೀಗ ಮೂಗೇರಿಸುತ್ತಿದ್ದಳು. ಜತೆಗೆ ಕೃಷ್ಣ ಒಳಗೆ ಹೋದಾಗ ಸಂಕೋಚ ಬೇರೆ ತೋರಿಸಿ ಎದ್ದು ಮುದುಡಿ ನಿಂತಳು. ಹೊರಗೆಲ್ಲ ಖಾಸೇ ಸುಮಾರು ಮಾತಿಗೆ ಕೃಷ್ಣ ಖ್ಯಾತಿ ಗಳಿಸಿದ್ದರೂ ಈ ಪುಟ್ಟ ಹುಡುಗಿಯ ಮುಂದೆ ಏನು ಮಾತಾಡಬೇಕೋ ತಿಳಿಯದೇ ಕಕ್ಕಾವಿಕ್ಕಿಯಾಗಿ ನಿಂತ. ಸಾವರಿಸಿಕೊಂಡು ಬಹಳ ಸೆಖೆಯಲ್ಲವಾ ? ಅಂದ. ಆದರೆ ಹುಡುಗಿಗೇನೂ ಸಖೆಯೆನಿಸಿರಲಿಲ್ಲ ವಾದರೂ ಸುಮ್ಮನೆ ತಲೆಯಾಡಿಸಿದಳು. ಮತ್ತೆ ಒಂದು ಹತ್ತು ನಿಮಿಷ ಇಬ್ಬರೂ ಮಾತಾಡಲಿಲ್ಲ. ಕೃಷ್ಣನೇ ಮತ್ತೊಮ್ಮೆ– ಈಗ ನೀನು ಉಟ್ಟಿರೋ ಧಾರೆ ಸೀರೆ ಇದೆಯಲ್ಲ, ಅದು ಮೈಸೂರು ಪೇಟೆಯಿಂದ ತಂದದ್ದು ಅಂದ. ಸೀರೆಯನ್ನು ಗೋದಾವರಿಬಾಯಿಯೇ ಆರಿಸಿ ತೆಗೆದಿದ್ದರೂ 'ನಿನಗಾಗಿ ನಾನೇ ನಿಂತು ಹುಡುಕಿ ತೆಗೆಸಿದ್ದು' ಎಂದು ಹೊಸದಾಗಿ ಬರಲು ಪ್ರಾರಂಭಿಸಿದ ಅರಸೀ ಕೆರೆಯ ರೈಲನ್ನು ಬಿಟ್ಟ. ಈಗಲೂ ಹುಡುಗಿ ಮಾತಾಡದೆ ಸೀರೆ ಚೆಂದವಿದೆ ಯೆಂಬಂತೆ ಕಣ್ಣಲ್ಲೇ ಉತ್ತರ ಕೊಟ್ಟಳು. ಹುಡುಗಿ ಸಂಕೋಚ ಬಿಡುತ್ತಿದ್ದಾಳೆನಿಸಿ– 'ಮಲ್ಲಿಗೆ ಹೂವಲ್ಲಿ ಚಂದ ಕಾಣುತ್ತೀ. ನಿನಗೆ ಗೊತ್ತಾ, ಈ ಮಲ್ಲಿಗೆ ನಮ್ಮ ಮನೆ ಹಿತ್ತಲಿನದು' ಎಂದು ಒಲಿಸಿಕೊಳ್ಳಲು ನೋಡಿದ. ಮುಂದೆ ಮಾತು ಬೆಳೆಸಬೇಕೆಂಬ ಆಸೆಯಿದ್ದರೂ ಬೆಳಿಗ್ಗೆಯಿಂದ ದಣಿದಿದ್ದ ಹುಡುಗಿ ಒಮ್ಮೆ ಅಗಲವಾಗಿ ಆಕಳಿಸಿದಳು. ಕೃಷ್ಣನಿಗೆ ಅವಳು ಮಲಗಲಿ ಅನಿಸಿತು. ಇಲ್ಲಿಗೆ ಬಂದಾಗ ಹುರುಪಿದ್ದರೂ ನಾರಾಯಣನ ವಿಷಯ ;

ಅಮ್ಮನ ಆತಂಕ ಇನ್ನೂ ಕಣ್ಣ ಮುಂದೆಯೇ ಇದ್ದುದ್ದರಿಂದ ತಾನೂ ಬೇರೆ ಕಡೆ ಮಲಗಿದರೆ ಆಗುತ್ತದೆನಿಸಿತು. ಹಾಗೆ- ಜೋಯಿಸರು ಮನೆಗೆ ಹೋಗುವಾಗ : 'ಇವತ್ತು ದಿನ ಪ್ರಶಸ್ತವಾಗಿದೆ. ಇಂದು ಬಿಟ್ಟರೆ ಹದಿನೈದು ದಿನ ಕಾಯಬೇಕು ತಿಳಿದಿರು....' ಎಂದೇನೋ ಹೇಳಿ ನಕ್ಕು ಹೋಗಿದ್ದರೂ ಜೋಯಿಸರ ಮಾತೇನು ನಾಳೆ-ನಾಡಿದ್ದು ನೋಡಿದರಾಯ್ತೆಂದು- ನೀನು ಮಲಗು ಸುಭದ್ರ ಅಂದದ್ದೇ ಹುಡುಗಿ ಸಂಕೋಚಬಿಟ್ಟು ಮಂಚದ ಮೇಲೆ ಹೋಗಿ ಕ್ಷಣಾರ್ಧದಲ್ಲಿ ನಿದ್ರೆಗೆ ಜಾರಿಬಿಟ್ಟಿದ್ದಳು. ಹಾಸಲು-ಹೊದೆಯಲು ಏನೂ ಇಲ್ಲದ ಕೃಷ್ಣನ ಮಂಚಕ್ಕೆದುರಾಗಿ ನಿದ್ದೆ ಹೋದ ಆಕೆಯ ಮುಖವನ್ನೇ ನೋಡುತ್ತ, ಏನೇನೋ ಚಿಂತಿಸುತ್ತ ಮುಂದೆ ಹೇಗಿದ್ದರೂ ನಿದ್ದೆಗೆಡುವುದಿದೆಯಲ್ಲ ಎಂದು ನಿದ್ದೆ ಹೋಗಿದ್ದ.

ಹೀಗಾಗಿ— ಒಂದು ರೀತಿಯಿಂದ ನಾರಾಯಣನ ದೆಸೆಯಿಂದ ಆ ದಿನ ಪ್ರಸ್ತ ನಡೆಯಲಿಲ್ಲ. ಸುಭದ್ರೆ ನರಳದೆ ನಿದ್ದೆ ಹೋಗಿದ್ದಳು.

ಕೃಷ್ಣ ಮುಂದೆ ಆಕೆಯನ್ನು ನರಳಿಸುವ ಬಗೆ ಚಿಂತಿಸುತ್ತ ನಿದ್ದೆ ಹೋಗಿದ್ದ.

ಗೋದಾವರಿಬಾಯಿ ಮಗನ ಕನವರಿಕೆಯಲ್ಲಿ ; ದುಃಖದಲಿ ನರಳುತ್ತ ನಿದ್ದೆ ಹೋಗಿದ್ದರು.

ಸುರೇಂದ್ರ- ಪಕ್ಕದಲ್ಲಿ ಭಾಗೀರಥಿಯಿಲ್ಲದೆ....

# ಎರಡು ಹೊಸ ಜೀವಗಳು

---

ಕೃಷ್ಣನಿಗೆ ಮದುವೆಯಾದಾಗಲೇ ಮೂವತ್ತು ದಾಟಿತ್ತಲ್ಲವೆ ? ಹಾಗೆಂದು ಆತನಲ್ಲಿ ಹರೆಯದ ಉತ್ಸಾಹ ; ಲವಲವಿಕೆಯೇನೂ ಬಾಡಿರಲಿಲ್ಲ. ನರಸಯ್ಯನವರ ರೋಮಾಂಚನಗೊಳಗಾಗಿಸುವ ಮಾತುಕೇಳುತ್ತ, ಕೃತಿಗಳನ್ನು ಗಮನಿಸುತ್ತ ಅವರೊಂದಿಗಿನ ಸುತ್ತಾಟದಲ್ಲಿ ಬೆಳೆದ ಆತನ ಬದುಕು ನಿಜವಾಗಿಯೂ ಈಗ ಪ್ರಾರಂಭವಾಗಿತ್ತು. ಈಗ ಕೃಷ್ಣಪ್ಪ, ಕೃಷ್ಣಯ್ಯ ಎಂದು ಗುರುತಿಸುತ್ತಿದ್ದ ಜನ, ಆತನನ್ನು ಕೃಷ್ಣಸ್ವಾಮಿ ಎಂದು ಕರೆದು ಗೌರವಿಸಲು ಇನ್ನೂ ಹತ್ತು ವರುಷಗಳು ಕಳೆಯಬೇಕಿದ್ದವು. ಹತ್ತೆಂಟು ಆಘಾತಗಳನ್ನು ಎದುರಿಸಲು ಆತ ಮನಸ್ಸನ್ನು ಇನ್ನಷ್ಟು ಗಟ್ಟಿ ಮಾಡಕೊಳ್ಳಬೇಕಿತ್ತು.

ಮದುವೆಯಾದ ದಿನ ಗೋದಾವರಿಬಾಯಿಗೆ, ಮನೆಯಲ್ಲಿನವರಿಗೆ ನೋವುಂಟುಮಾಡಿ ಹೋಗಿದ್ದ ನಾರಾಯಣ ಈ ಸಲ ವಾರವೊಪ್ಪತ್ತು, ಹದಿನೈದು ದಿನ, ತಿಂಗಳು ಎಂದು ಕಾದರೂ ಬರಲಿಲ್ಲ. ಅರಸೀಕೆರೆ, ಹಾಸನ, ಚಿಕ್ಕಮಗಳೂರುಗಳಲ್ಲಿ ಆತನನ್ನು ಅರಿತವರಿಂದ ವಿಷಯ ಸಂಗ್ರಹಿಸಲು ಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಗೋದಾವರಿಬಾಯಿ ಈ ವ್ಯಸನದಲ್ಲಿಯೇ ಒಂದೆರಡು ವಾರ ಕೊರಗುತ್ತ ಕಳೆದರೂ, ನಿಧಾನಕ್ಕೆ ಅವನಿಲ್ಲದ ಬದುಕಿನ ಗತಿಗೆ ಹೊಂದಿಕೊಳ್ಳಲು ಯತ್ನಿಸಿದರು. ನೋಡಿದರೆ ; ಬುದ್ಧಿ ತಿಳಿದಮೇಲೆ ಅವನೆಂದೂ ತಮ್ಮೊಂದಿಗೆ ಹಳ್ಳಿಯಲ್ಲಿ ಇಲ್ಲದಿದ್ದರೂ ಅದ್ದೇಗೆ ಅಷ್ಟೊಂದು

ಹಚ್ಚಿಕೊಂಡಿದ್ದೇನೆಂಬುದು ಅವರ ಅರಿವಿಗೆ ಬರಲಿಲ್ಲ. ಅವನ ಅಗಲಿಕೆಯ ದುಂಃಖಿಗಿಂತ ಬಿಸಿರಕ್ತದ ಹುಮ್ಮಸ್ಸಿನಲ್ಲಿ ಹುಡುಗ ಕೆಟ್ಟದ್ದನ್ನೇನಾದರೂ ಮಾಡಿಕೊಂಡು ಬಿಡುತ್ತಾನೋ ಎನ್ನುವ ಭಯ ಅವರಿಗೆ ಕಾಡುತ್ತಿತ್ತು. ಹಾಗನಿಸಿದಾಗೆಲ್ಲ ದೇವರ ಮುಂದೆ ನಂದಾದೀಪ ಹಚ್ಚಿಟ್ಟು, ಗಲ್ಲಬಡಿದು ಕೊಂಡು ಮನಸ್ಸು ಹಗುರ ಮಾಡಿಕೊಳ್ಳುತ್ತಿದ್ದರು. ಹೆಚ್ಚಿನ ಸಮಯ ಒಂಟಿ ಯಾಗಿರದೆ ಮಗಳು ಭಾಗೀರಥಿಯೊಂದಿಗೆ ಮಾತನಾಡುತ್ತಲೋ ಹಿತ್ತಲು ಕೆಲಸ ದಲ್ಲಿಯೋ ಕಳೆಯುತ್ತಿದ್ದರು. ಭಾವನ ಮನೆಯವರು 'ಶೂದ್ರ ಹೆಣ್ಣು ಮಕ್ಕಳ ಹಾಗೆ ಇದೇನು ಅಸಹ್ಯ' – ಎಂದು ಬೆನ್ನಹಿಂದೆ ಆಡಿಕೊಂಡರೂ ಈಗೀಗ ಕೃಷ್ಣನೊಂದಿಗೆ ತೋಟಕ್ಕೆ, ಹೊಲದ ಕೆಲಸಗಳಿಗೆ ಹೋಗಲು ಪ್ರಾರಂಭಿಸಿದ್ದರು. ಹಾಗೂ ಬೇಸರವಾದರೆ ಸೊಸೆಯನ್ನು ಸಿಂಗರಿಸುವುದರಲ್ಲಿ; ಆಕೆಗೆ ಬಯಲು ಸೀಮೆಯ ಅಡುಗೆ ಕಲಿಸುವಲ್ಲಿ ಕಾಲಕಳೆಯುತ್ತಿದ್ದರು. ಆದರೂ ಅವರಿಗೆ ಕೊನೆಯವರೆಗೂ ಅರ್ಥವಾಗಲಿಲ್ಲ: 'ಗಂಡ ಹೋದಾಗಲೂ ತವಕಪಡದ ಮನಸ್ಸು ಮಗ ಕಣ್ಮುಂದೆ ಇಲ್ಲದಾಗ ಯಾಕಿಷ್ಟು ಉದ್ವಿಗ್ನವಾಗು ತ್ತದೆ ? ತಾವು ಚಿಕ್ಕಂದಿನಲ್ಲಿ ಮಕ್ಕಳನ್ನು ಮುದ್ದುಮಾಡುತ್ತ ಕೂತಾಗ ಇವರು ಅನ್ನುತ್ತಿದ್ದರಲ್ಲ – 'ಅಲ್ಲವೇನೇ ಗೋದಾವರಿ ? ನೋಡು ಮತ್ತೆ : ನಿನಗೆ ಹೇಗೆ ನಾನು ಎದುರಿಗಿದ್ದರೂ ನನಗಿಂತ ಮಕ್ಕಳೇ ಹೆಚ್ಚಾಗಿ ಕಣ್ಣಿಗೆ ಕಾಣ್ತಾವಲ್ಲ ? ಅದಕ್ಕೇ ಅಲ್ಲೇನು ದೇಹಸಂಬಂಧ ನೀರಿನ ಸಂಬಂಧ, ಹೊಟ್ಟೆಯ ಮಕ್ಕಳದು ರಕ್ತಸಂಬಂಧ – ನೀರಿಗಿಂತ ರಕ್ತಸಂಬಂಧ ಹೆಚ್ಚು....' ಅಂತ ಗೇಲಿ ಮಾಡುತ್ತಿದ್ದರಲ್ಲ. ಅವರು ತಮಾಷೆಗೆ ಹೇಳಿದ್ದರೋ ನಿಜ ವಾಗಿಯೂ ಹೇಳಿದ್ದರೋ ಅದೆಲ್ಲ ಈಗ ನಿಜವೆನಿಸುತ್ತದೆ–ಆದರೆ ನಾರಾಯಣ ಹೀಗೆ ಮಾಡಬಾರದಿತ್ತು. ಈ ಮನೆಯಲ್ಲಿ ಅವನಿಗೆ ಉಣ್ಣುವುದಕ್ಕೆ, ತಿನ್ನು ದಕ್ಕೆ ಯಾವುದಕ್ಕೂ ಕಡಿಮೆಯಾಗಿರಲಿಲ್ಲ. ಅವನ ಅಪ್ಪಯ್ಯ ಇಲ್ಲದಿರುವ ಭಾವನೆ ಮನಸಲ್ಲೂ ಸುಳಿಬಾರದು ಹಾಗೆ ನೋಡಿಕೊಂಡ ಕೃಷ್ಣ. ನಾಣಿ ಕೊನೆಯವರೆಗೂ ದುಡುಕಿದ ಅಂತಲೇ ಅನಿಸುತ್ತದೆ.... ಹೀಗೆ ಅವರ ಯೋಚನೆಗಳು. ಆಗೆಲ್ಲ ಇದ್ದಕ್ಕಿದ್ದಂತೆ ಕೃಷ್ಣನ ಮೇಲೆ ವಿಶೇಷ ಮಮತೆವುಕ್ಕಿ ಬಂದು ಅವನ ಸಂಸಾರವಾದರೂ ಚೆಂದವಾಗಿರಲಿ ಎಂದು ಮನಸ್ಸಿನಲ್ಲಿಯೇ ಹರಿಸುವರು. ಇನ್ನಷ್ಟು ಮನೆ ಬೆಳೆಸುವತ್ತ ಗಮನ ಹರಿಸುವರು.

ಈಗಾಗಲೇ ಮದುವೆಯ ಬಿಸಿಯಾರಿ ತಿಂಗಳ ಮೇಲಾಗಿತ್ತು. ಆ ರಾತ್ರಿಯೇನೋ ಪ್ರಸ್ತ ನಡೆಯಲಿಲ್ಲವಾದರೂ ನಡೆದದ್ದು ಅದರ ಮರು ದಿನವೋ ಅದರ ಮರು ದಿನವೋ ಕೃಷ್ಣ-ಸುಭದ್ರೆಯ ಹೊರತಾಗಿ ಯಾರಿಗೂ ಗೊತ್ತಾಗಲಿಲ್ಲ. ಆದರೆ ಕೃಷ್ಣನಿಗೆ ಹುಡುಗಿ ಪೀಚುಪೀಚಲ್ಲ, ಚಾಲಾಕಿನವಳು, ಒಯ್ಯಾರಿ ಎಂದು ಗೊತ್ತಾಗಿದ್ದರೂ-ಆಕೆಯಲ್ಲಿದ್ದ ಸಂಕೋಚ ಎರಡೇ ದಿನಕ್ಕೆ ಕರಗಿದೆಯೆಂದು ಅನಿಸಿದ್ದರೂ ಅದನ್ನು ಯಾರ ಮುಂದೆಯೂ ಹೇಳಲಿಲ್ಲ. ಅಮ್ಮನಿಗೆ ಸೂಚ್ಯವಾಗಿ ಈ ವಿಷಯ ಹೇಳಲು ನಾಚಿಕೆ ಅಡ್ಡ ಬರುವುದ ರೊಂದಿಗೆ ಆಕೆ ನಾಣೆಯನ್ನು ಕುರಿತು ಧೇನಿಸುತ್ತಿರಬಹುದೆಂದು ಸುಮ್ಮನಾಗಿ ಬಿಟ್ಟಿದ್ದ. ಸುಭದ್ರೆಯೂ ಬಂದ ನಾಲ್ಕೇ ದಿನಕ್ಕೆ ಹೊಂದಿಕೊಂಡು ಸಾಸಿವೆ, ಜೀರಿಗೆ, ಬೆಲ್ಲ ಎಂದೆಲ್ಲ ಡಬ್ಬಿಗಳನ್ನು ಹುಡುಕಿ ಅಮ್ಮನಿಗೆ ಹತ್ತಿರವಾಗುತ್ತಿರು ವುದು ಅವನಿಗೆ ಸಂತಸ ತಂದಿತ್ತು. ಹೀಗಿರುವಾಗಲೇ ಐದು ತಿಂಗಳು ತುಂಬಿ ರುವ ಭಾಗೀರಥಿಯ ಸೀಮಂತ ಮುಗಿಸಿದರೆ ಒಳ್ಳೆಯದೆಂಬ ಆಲೋಚನೆಯೂ ಸುಳಿದು ಹೋಗಿ ಗೋದಾವರಿಬಾಯಿಯ ಮುಂದೆ ವಿಷಯ ಪ್ರಸ್ತಾಪಿಸಿದ. ಗೋದಾವರಿ ಬಾಯಿಗೋ ಯಾವುದರಲ್ಲಾದರೂ ತೊಡಗಿದ್ದರೆ ಮನಸ್ಸು ನಿರಾಳವಾಗುತ್ತದೆ ಅನಿಸುವ ದಿನಗಳವು. ಸಂಭ್ರಮದಿಂದ ಒಪ್ಪಿದರು. ಕೃಷ್ಣ ಅದೇ ದಿನ ಮದುವೆಯಾದ ನಂತರವೇ ಕಟಾವಿಗೆಂದು ಸೀತಾನದಿಗೆ ಹೊರಟು ಬಿಟ್ಟಿದ್ದ. ಸುರೇಂದ್ರನಿಗೆ ಬೇಸಾಯಗಾರ ಕಾಡಜ್ಜನ ಮೂಲಕ ಸಮಾಚಾರ ತಲುಪಿಸಲು ಏರ್ಪಾಡು ಮಾಡಿದ. ಗೋದಾವರಿಬಾಯಿ ಮತ್ತೊಮ್ಮೆ ಚಕ್ಕುಲಿ, ಕರ್ಜಿಕಾಯಿ, ಪದರು ಪೇಣಿ, ಮಣ್ಣಿ ಮಸಿಯೆಂದು ವಾರಗಟ್ಟಲೇ ಸೀಮಂತದ ತಯಾರಿಯಲ್ಲಿ ತೊಡಗಿದರು. ಎಲ್ಲರೂ ಒಂದು ದಿನ ಗೊತ್ತು ಮಾಡಿ ಅರಸೀಕೆರೆಗೆ ಹೋಗಿ ಭಾಗೀರಥಿ ಇಷ್ಟಪಟ್ಟ ನೇರಳೆ ಬಣ್ಣದ ಸೀರೆ ಯನ್ನು ಕೊಂಡುತಂದರು. ಅಲ್ಲೇ ಒಂದು ದಿನವಿದ್ದು ಪರಿಚಯದ ಮುತ್ತೈದೆ ದಿಯರಿಗೆಲ್ಲ ದಿನಗೊತ್ತು ಮಾಡಿದ ಮೇಲೆ ಬಂದು ಹೇಳುವುದಾಗಿಯೂ, ತಪ್ಪದೆ ಅರಿಶಿಣ ಕುಂಕುಮ ತೆಗೆದುಕೊಂಡು ಹೋಗಲು ಬರಬೇಕೆಂದೂ ಬಂದು ಹೋಗಲು ಚಕ್ಕಡಿ ವ್ಯವಸ್ಥೆ ಮಾಡುವುದಾಗಿಯೂ ತಿಳಿಸಿ ಬಂದರು. ಕೃಷ್ಣನಿಗೆ ಮನೆಯವರೆಲ್ಲ ಖುಷಿಯಾಗಿರುವುದು ನೆಮ್ಮದಿಯೆನಿಸಿತು. ಅಮ್ಮ ನಾರಾಯಣನ ವಿಷಯ ಮರೆತು ದೈನಿಕದಲ್ಲಿ ತೊಡಗಿದರೆ ಸಾಕೆನಿಸಿತು.

ಅವರೆಲ್ಲ ಅರಸೀಕೆರೆಯಿಂದ ಚಕ್ಕಡಿ ಹತ್ತಿ ಹಳ್ಳಿಗೆ ಬರುವಾಗ ಕೃಷ್ಣ ವಿಚಿತ್ರ ಮನಸ್ಥಿತಿಯಲ್ಲಿದ್ದ. ಮನಸ್ಸನ್ನು ಹಗುರಗೊಳಿಸಿಕೊಳ್ಳಲು ಎಲ್ಲರಿಗಿಂತ ಕೊನೆಯಲ್ಲಿ ಎತ್ತಿನ ಗಾಡಿ ಹತ್ತಲಿದ್ದ ಸುಭದ್ರೆಯ ಕಿವಿಯಲ್ಲಿ ತುಂಟತನದಲ್ಲಿ ಉಸುರಿದ್ದ– '.... ನಿನಗ್ಯಾವಾಗಲೇ ಹೊಟ್ಟೆ ಹೀಗಾಗಿ ಸೀಮಂತ ನಡೆಸೋದು....' ಸುಭದ್ರೆಗೆ ಮನಸ್ಸಲ್ಲಿ ಖುಷಿಯಾದರೂ ಕೋಪ–ನಾಚಿಕೆಯಲ್ಲಿ ಮುಖ ಕೆಂಪಾಗಿ 'ಅಮ್ಮಾ' ಎಂದು ಚಿಕ್ಕದಾಗಿ ಕೂಗು ಹಾಕಿದಳು. ಇವಳ ಕೂಗಿಗೆ ಗಾಡಿಯಲ್ಲಿ ಕೂತ ಗೋದಾವರಿಬಾಯಿ–ಭಾಗೀರಥಿ 'ಏನಾಯ್ತು ?' ಎಂದು ತುಸು ಮುಂದೆ ಜರುಗಿ ಬಗ್ಗಿದರು. ಕೃಷ್ಣನಿಗೆ ಪೇಚಾಟಕ್ಕಿಟ್ಟುಕೊಂಡು–'ಏನಿಲ್ಲ ಹತ್ತುವಾಗ ಕಾಲು ಉಳುಕಿರಬೇಕು. ಇಲ್ಲ ಅಂಗಾಲಿಗೆ ಮುಳ್ಳುಗಿಳ್ಳು ಚುಚ್ಚಿರಬೇಕು' ಎಂದು ಮಾತು ಮರೆಸಲು ನೋಡಿದ. ಗೋದಾವರಿಬಾಯಿಗೆ ಕೃಷ್ಣ ಅವನ ಅಪ್ಪಯ್ಯನಿಂದ ಪಡೆದ ಮಾತಿನ ಬಳುವಳಿ ಗೊತ್ತಾಗಿ, ಅವರಿಬ್ಬರ ಚುರುಕು ನಾಲಿಗೆ ಅನುಭವವಿದ್ದುದರಿಂದ— 'ಸರಿಯಪ್ಪಾ, ನೀ ಹೇಳಿದ ಮೇಲೆ' ಎಂದು ನಕ್ಕು ಹಗುರಾದರು.

ಮುಂದೊಂದು ವಾರಕ್ಕೆ ಹೆಂಡತಿಯನ್ನು ತಿಂಗಳಿಗೂ ಮಿಗಿಲಾಗಿ ಬಿಟ್ಟಿದ್ದ ಸೀತಾನದಿ ಸುರೇಂದ್ರ ತೀರ್ಥಹಳ್ಳಿ ಕಡೆಯಿಂದ ಜಿಗಿಯುತ್ತ ಬಂದ. ಕಳೆದ ಸಲಕ್ಕಿಂತ ಮೈತುಂಬಿಕೊಂಡಿದ್ದ ಭಾಗೀರಥಿಯನ್ನು ಕಂಡು 'ಹಠಮಾರಿ ಮಗುವಿನ ಹಾಗೆ ; ಸಾಕಿದ ಬೆಕ್ಕಿನ ಹಾಗೆ' ಆಕೆಯ ಸೆರಗನ್ನೇ ಹಿಡಿದು ಸುತ್ತಿದ. ಸಂಪತ್ತು ಶುಕ್ರವಾರದಂದು ಹೆಂಡತಿಯನ್ನು ಮಣೆಯ ಮೇಲೆ ಕೂಡಿಸಿ, ಹೂ ಮುಡಿಸಿ, ಆರತಿ ಮಾಡಿದ್ದನ್ನು ಭಾವಮೈದುನನ ಪಕ್ಕ ನಿಂತು ನೋಡಿದ. ಹೋಗುವಾಗಲೂ ಸಹ ಹೆರಿಗೆಯಾಗುವವರೆಗೂ ಬಿಟ್ಟಿರಬೇಕಲ್ಲ ಎಂದು ಗುನುಗುತ್ತಲೇ ಹೋದ. ಈತ ಯಾಕೆ ಮಗುವಿನ ಹಾಗೆ ; ಬೆಕ್ಕಿನ ಹಾಗೆ ; ಮೊಲೆತೊಟ್ಟು ಜಗ್ಗುವ ಕರುವಿನ ಹಾಗೆ ಭಾಗೀರಥಿಯ ಮೈ ತಿಕ್ಕುತ್ತ ಸುತ್ತುತ್ತಾನೋ ಎಂದು ಕೃಷ್ಣನಿಗೆ ಆಶ್ಚರ್ಯ !

ಈ ದಿನಗಳಲ್ಲಿ ಗೋದಾವರಿಬಾಯಿಯಂತೂ ತುಂಬು ಖುಷಿಯಲ್ಲಿದ್ದರು. ಮಗಳ ಕೂಸು ಹುಟ್ಟುವ ಮೊದಲೇ ಕುಲಾವಿ, ಕುಂಚಗಿ, ದುಪ್ಪಡಿ ಎಂದು ಹಳೆಯ ಬಟ್ಟೆಗಳನ್ನು ಹರವಿಕೊಂಡು ಮುಂದೆ ಸುಭದ್ರೆಯ ಮಕ್ಕಳಿಗೆ ಬೇಕಲ್ಲ ಎಂದು ಎರಡೆರಡು ಜತೆ ಹೊಲಿದಿಟ್ಟರು. ಅವರಿಗೆ ಈವ

ರೆಗೆ ಇರದೆಯಿದ್ದ ಹೊಸ ಅರ್ಥವೊಂದನ್ನು ಬದುಕು ಕೊಡತೊಡಗಿತ್ತು. ಮುಗಿದು ಹೋಗುವ ಹಳೆಯ ಜೀವ : ಹೊಸ ಜೀವಗಳ ನಿರೀಕ್ಷೆಯಲ್ಲಿ ಕಾಲ ಹಾಕುತ್ತ, ಹೊಸತನ ತುಂಬಿಕೊಂಡಿತು. ಈ ಖುಷಿ ಹೆಸರಿಸಲಾರದ ಸುಖದ ನಡುವೆ ಹಳೆಯ ದುಃಖ–ನಾರಾಯಣನಿಲ್ಲವೆನ್ನುವ ಮೂಕವೇದನೆ ತುಸುತುಸು ಮರೆಯಾಗುತ್ತಿದ್ದರೆ ಇತ್ತ ಕೃಷ್ಣ ಶಾನುಭೋಗಿಕೆಯಲ್ಲಿ, ಜಮೀನು ತೋಟದಲ್ಲಿ ಕಾಡಜ್ಜನೊಂದಿಗೆ ಹೆಚ್ಚು ಹೆಚ್ಚು ನಿಗಾವಹಿಸತೊಡಗಿದ.

೦ ೦ ೦

ಗೋದಾವರಿಬಾಯಿಯೇನೋ ಕೃಷ್ಣನ ಮಕ್ಕಳಿಗೂ ಬೇಕಾಗುತ್ತದೆನಿಸಿದ್ದ ರಿಂದ ಒಂದು ಜತೆ ಹೆಚ್ಚಿಗೆ ಕುಲಾವಿಯನ್ನೇನೋ ಹೊಲೆದಿಟ್ಟದ್ದರು. ಆದರೆ ಅವರಿಗೇನು ಗೊತ್ತು ಆ ಸುಯೋಗ ಇಷ್ಟು ಬೇಗ ಬರುತ್ತದೆಂದು ? ಹಿಂದೆಲ್ಲ ತಾವು 'ಅಪ್ಪಯ್ಯ, ನನ್ನ ತೊಡೆಮೇಲೆ ಮಲಗಿ ಒದ್ದೆ ಮಾಡುಕ್ಕೆ ನಿನ್ನದೊಂದು ಮಗು ಕೊಡೋ....' ಎಂದಾಗ ಮದುವೆಯೇ ಆಗಲು ತಯಾರಿಲ್ಲದ ಕೃಷ್ಣ, ಭಾಗೀರಥಿಯ ಚೊಚ್ಚಲ ಬಾಣಂತನ ಮುಗಿದಿರಲಿಲ್ಲ ; ಹುಟ್ಟಿದ ಮಗುವಿಗೆ ನಾಮಕರಣ ಮಾಡಿ ಒಂದು ತಿಂಗಳಾಗಿತ್ತಷ್ಟೇ ಆಗಲೇ ತನ್ನ ಹೆಂಡತಿ ಸುಭದ್ರೆಗೆ ಸೀಮಂತ ಮಾಡಿಸುವ ಪ್ರಸಂಗ ತರುತ್ತಾನೆಂದರೆ ನಿಜಕ್ಕೂ ಗೋದಾವರಿಬಾಯಿಗೆ ಆಶ್ಚರ್ಯವೇ. ಹುಡುಗನಿಗೆ ಮದುವೆ ಮಾಡಿದ್ದು ಬಹಳ ತಡ, ಸಂಸಾರದಲ್ಲಿ ಆಸಕ್ತಿ ಕುದುರಿ ಮಕ್ಕಳು–ಮರಿಂತ ಆಗಬೇಕಾದರೆ, ಮನೆ ಜವಾಬ್ದಾರಿಗಳ ನಡುವೆ ಅವನ ಬದುಕೊಂದು ದಡಹತ್ತಿ ಮಗುವಿನ ನಗು–ಅಳು ಈ ಮನೆ ತುಂಬಬೇಕಾದರೆ ಇನ್ನೂ ಒಂದೆರಡು ವರ್ಷವೇ ಹಿಡಿ ದೀತು, ನಾನಾವರೆಗೆ ಬದುಕಿರುತ್ತೇನೋ – ಇಲ್ಲವೋ, ನನಗೆ ಅಂಥ ವಯ ಸ್ಸೇನೂ ಆಗಿರದಿದ್ದರೂ ಈ ಕಾಲದಲ್ಲಿ ಎಲ್ಲಿ ಹೇಳಲಾಗುತ್ತದೆ ? ಹಾಗೆ ನೋಡಿದರೆ ಇವರಿಗೇನಾಗಿತ್ತು ? ಗಟ್ಟಿಮುಟ್ಟಾಗಿಯೇ ಇದ್ದರಲ್ಲ ?.... ಎಂದೆಲ್ಲ ಅಂದುಕೊಂಡು ನನಗೇನಾದರೂ ಆಗುವ ಮೊದಲೇ ನಮ್ಮ ವಂಶದ ಬಳ್ಳಿಯನ್ನು ನೋಡಿದರೆ ಸಾಕು ಎಂದು ಗೋದಾವರಿಬಾಯಿಯವರ ಜೀವ ತವಕಿಸುತ್ತಿತ್ತು. ಅಂಥ ಜೀವಕ್ಕೆ ಸೊಸೆ ಗರ್ಭಿಣಿಯಾಗಿದ್ದಾಳೆಂದರೆ ಹೇಗಾಗಿರ

ಬೇಡ. ಅಂದೆಲ್ಲ ಅವರ ಮನಸ್ಸು ವಿಚಿತ್ರ ಭಾವನೆಗಳಿಂದ ತುಂಬಿತ್ತು. ಅವರಿಗೆ ತಮ್ಮ ಚೊಚ್ಚಿಲ ಬಸಿರು ನೆನಪಿಗೆ ಬಂತು. ಚೊಚ್ಚಿಲ ಮಗು ಎಂದರೆ ಯಾರು ? ಇದೇ ಈ ಕೃಷ್ಣ ತಾನೇ ? ಇವ ಹೀಗೆ ಹೊಟ್ಟೇಲಿ ಬೆಳಿತಿದ್ದಾಗ ನನ್ನ ವಯಸ್ಸೇನು ಮಹಾ – ನಾನು ಮೈನೆರೆದು ಮೂರುನಾಕೋ ವರ್ಷ ವಾಗಿತ್ತಷ್ಟೇ. ಅದು ಏನು ಕಡಿಮೆ ರಾದ್ಧಾಂತ ಮಾಡಿ ಹುಟ್ಟಿದನಾ ಈ ಕೃಷ್ಣ. ಒಂಬತ್ತು ತಿಂಗಳು ತುಂಬಿ ಒಂದು ಎರಡೇನು ಹದಿನೈದು ದಿನ ವಾದರೂ ಏನನ್ನೋ ಕಾದುಕೂತವನಂತೆ ಹೊರಗೆ ಬರಲಿಲ್ಲ. ನನಗೆ, ಅಮ್ಮ ನಿಗೆ ಎಷ್ಟೆಲ್ಲ ಗಾಬರಿ ಹುಟ್ಟಿಸಿದ. ಅಪ್ಪನದೋ ಕಾಡಿನ ನಡುವೆ ಒಂಟಿಮನೆ. ಇವರು–ಅಪ್ಪ ಕಾದರು. ಗಂಡಸರು, ಎಷ್ಟು ದಿನವೂಂತ ಕಾದಾರು ? ತಮ್ಮ ಕೆಲಸಗಳಿಗೆ ಕೈಕೊಡವಿ ಹೊರಟುಬಿಟ್ಟರು. ಆಮೇಲೆ ಹತ್ತು–ಹದಿನೈದು ದಿನಕ್ಕೆ ಇವ ಹುಟ್ಟಿದ. ಅಮ್ಮ 'ಅಂತೂ ಗಜಗರ್ಭವೇ ಗೋದಾವರಿ ನಿನ್ನದು' ಎಂದು ಯಾವಾಗಲೂ ಹೇಳುತ್ತಿದ್ದಳು. ಅಂಥ ಈ ಕೃಷ್ಣನಿಗೀಗ ಮಗು ವಾಗುತ್ತದೆಂದರೆ ತನಗಿಂತ ಖುಷಿ ಇನ್ಯಾರಿಗೆ. ಸುಭದ್ರೆಯ ಸೀಮಂತವನ್ನು ಮಗಳ ಬಾಣಂತನದ ನಡುವೆಯೂ ಭರ್ಜರಿಯಾಗಿಯೇ ಮಾಡಿದರು. ಭಾಗೀ ರಥಿಯ ಮಗುವಿಗೆ ಐದುತಿಂಗಳು ತುಂಬುವವೇಳೆಗೆ ಕೃಷ್ಣನ ಹೆಂಡತಿಯಮಗು ಹುಟ್ಟಬಹುದು ಎಂದು ಸುರೇಂದ್ರ ನಾಮಕರಣಕ್ಕೆಂದು ಬಂದಾಗ ಅವನಿಗೆ ಸೂಚ್ಯವಾಗಿ ಹೇಳಿದರು. ಸುರೇಂದ್ರ ಅಷ್ಟರಲ್ಲಿಯೇ ಜೋಯಿಸರ ಬಳಿ ಪಂಚಾಂಗ ತೆಗೆಸಿ ಒಳ್ಳೆಯ ದಿನವನ್ನು ನೋಡಿ ಭಾಗೀರಥಿಯನ್ನು ಕರೆದು ಕೊಂಡು ಹೊರಟ. ಅವರಿಬ್ಬರನ್ನು ತೀರ್ಥಹಳ್ಳಿವರೆಗೆ ಕೃಷ್ಣ ಹೋಗ ಬೇಕೆಂದು ಮೊದಲೇ ಗೊತ್ತಾಗಿದ್ದರೂ – ಹೋಗುವ ಒಂದೆರಡು ದಿನಗಳ ಮೊದಲು – 'ಹಳೆಯ ವಾಯಿದೆಯೊಂದು ಅದೇ ದಿನವಿರುವುದರಿಂದ ತಾನು ಮೈಸೂರಿಗೆ ಹೋಗಬೇಕೆಂದು, ಕಾಡಜ್ಜನನ್ನು ಜತೆಯಲ್ಲಿ ಕಳಿಸುವು ದಾಗಿಯೂ–' ಹೇಳಿದ್ದ. ತುಂಬಿದ ದಿನಗಳ ಗರ್ಭಿಣಿಯನ್ನು ಬಿಟ್ಟು ಗೋದಾ ವರಿಬಾಯಿಯೂ ಹೋಗುವ ಹಾಗಿರಲಿಲ್ಲ. ಎಲ್ಲರೂ ಕಾಡಜ್ಜನೆ ಸರಿ ಎಂದು ಒಪ್ಪಿದರು. ಗಾಡಿ ಅಂದು ಪ್ರಯಾಣ ಬೆಳೆಸಿತು.

ನಿಜವೆಂದರೆ ಕೃಷ್ಣ ಹೇಳಿದ ಅಂಥ, ಮೈಸೂರಿನಲ್ಲಿ ಯಾವ ಹಳೆಯ ವಾಯಿದೆಯೂ ಇರಲಿಲ್ಲ ! ಹಾಗೆಂದು ತಂಗಿಯೊಂದಿಗೆ ಸುಳ್ಳು ಹೇಳಿ ಅವ

ಟೊಂದಿಗೆ ಹೋಗುವುದನ್ನು ತಪ್ಪಿಸಿಕೊಳ್ಳಬೇಕೆಂದೇನೂ ಅವನಿಗಿರಲಿಲ್ಲ ! ತಾನು ಎಲ್ಲರೂ ನಂಬುವಂಥ ಸುಳ್ಳು ಹೇಳಿದ್ದೇಕೆಂದು ಅವನಿಗೆ ಗೊತ್ತಾಗ ಲಿಲ್ಲ ! ಆದರೆ ಮನಸ್ಸಿನಲ್ಲಿದ್ದ ಭಾವನೆಯೆಂದರೆ ತಾನು ಈ ಸಂದರ್ಭದಲ್ಲಿ ಒಂದು ಕ್ಷಣವೂ ಸುಭದ್ರೆಯನ್ನು ಬಿಟ್ಟಿರಬಾರದು ಎಂದು ! ಇಷ್ಟು ದಿನಗಳ ಕಾಲ ಇಲ್ಲದ, ಯಾವತ್ತೂ ಬೇಕೆನಿಸದ ಹೆಣ್ಣಿನಸಂಗ ಈಗೇಕೆ ಬೇಕೆನಿಸುತ್ತದೆ? ಯಾವತ್ತೂ ಬೇಕೆನಿಸಿರಲಿಲ್ಲವೆ ? ಅದನ್ನು ಕೃಷ್ಣ ಸಂಪೂರ್ಣವಾಗಿ ಹೌದೆಂದು ಹೇಳಲಾರ. ಆದರೆ ಈ ಸುಭದ್ರೆ ಯಾವಾಗಲೂ ಬೇಕೆನಿಸಿದ್ದು, ಆಕೆ ಹಾಗೆ ಮಾಡಿದ್ದು ಅವನ ಪಾಲಿಗೆ ನಿಜ. ಇರುವ ಕೆಲಸವೆಲ್ಲ ಬಿಟ್ಟು ಅವಳ ಸೆರಗು ಹಿಡಿದು ಸುತ್ತಬೇಕೆನಿಸುತ್ತದೆ–ಅವನಿಗೆ. ಮಗುವಿನ ಹಾಗೆ, ಅವಳ ಕೈಹಿಡಿದು ಜೋಪಾನವಾಗಿ, ಇದೀಗ ನಡೆಯಲು ಕಲಿಯುತ್ತಿರುತ್ತದಲ್ಲ ಆ ಮಗುವಿನ ಹಾಗೆ, ನಡೆಯಬೇಕೆನಿಸುತ್ತದೆ–ಅವನಿಗೆ. ಹೋದಹೋದಲ್ಲೆಲ್ಲ ಕಾಲಿಗೆ ತೊಡರುವ ಸಾಕಿದ ಬೆಕ್ಕಿನಹಾಗೆ ಅವಳು ನಿಂತಲ್ಲಿ–ಕುಳಿತಲ್ಲಿ, ಮಲಗಿದರೆ ತಲೆಯ ದೆಸೆಯಲ್ಲಿ ಅವಳ ಹೆಸರನ್ನು ಕರೆಯುತ್ತ ಇರಬೇಕೆನಿಸುತ್ತದೆ–ಅವನಿಗೆ. ಸುಭದ್ರೆ–ಸುರೇಂದ್ರರೊಂದಿಗೆ ತೀರ್ಥಹಳ್ಳಿಯವರೆಗೆ ಚಕ್ಕಡಿಯಲ್ಲಿ ಕಳಿಸಲು ಹೋಗಿದ್ದರೆ ವಾಪಸ್ಸು ಬರುವುದು ವಾರವಾದರೂ ಹಿಡಿಯುತ್ತಿತ್ತು. ಈ ಒಂದು ವಾರದ ಕಾಲ ಸುಭದ್ರೆಯನ್ನು ಬಿಟ್ಟಿರುವ ಕಲ್ಪನೆಯನ್ನೇ ಮಾಡಿ ಕೊಳ್ಳಲು ಕೃಷ್ಣ ಸಿದ್ಧನಿರಲಿಲ್ಲ. ಈ ವಿಷಯ ಸುರೇಂದ್ರನಿಗೇನಾದರೂ ತಿಳಿದರೆ ಬಹುಶಃ ಆತನೂ ತನ್ನಂತೆ – 'ಯಾಕೆ ಈ ಕೃಷ್ಣ ಹೆಂಡತಿಯ ಸೆರಗು ಮೂಸುತ್ತ ಹರಮಾರಿ ಮಗುವಿನಹಾಗೆ, ಮೊಲೆತೊಟ್ಟು ಜಗ್ಗುವ ಕರುವಿನ ಹಾಗೆ, ಬೆಕ್ಕಿನಹಾಗೆ ತಿರುಗುತ್ತಾನೋ'– ಎಂದು ಕೊಳ್ಳುತ್ತಾನೇನೋ ಅನಿಸಿ ಮುಖ ಕೆಂಪಾಗುವುದು–ಅವನಿಗೆ.

೦ ೦ ೦

ಗೋದಾವರಿಬಾಯಿ ಈ ಸಲಕ್ಕಂತೂ ಕುಣಿದು ಕುಪ್ಪಳಿಸುವುದೊಂದು ಬಾಕಿಯಿತ್ತು ಮತ್ತೆ. ಮಾತ್ರ ಅಷ್ಟೊಂದು ಖುಷಿಯನ್ನು ಅವರು ಮಗಳು ಗಂಡುಮಗು ಹೆತ್ತಾಗಲೂ ಅನುಭವಿಸಿರಲಿಲ್ಲ. ಆದರೆ ಸೊಸೆ ಸುಭದ್ರೆ ಗಂಡು

ಮಗು ಹೆತ್ತಾಗ ಉಂಟಾದ ಅತಿ ಸಂತೋಷದಲ್ಲಿ ಅವರು ಗಲ್ಲಬಿರಿದು ಹೋಗುವಹಾಗೆ ಹಿತ್ತಲಲ್ಲಿ, ಅಡುಗೆ ಮನೆಯಲ್ಲಿ, ಮುಸುರೆ ತೊಳೆಯಲು ಬಚ್ಚಲು ಮನೆಯಲ್ಲಿ ಕೂತಾಗ ಅಲ್ಲಿ ನಕ್ಕರು. ವಂಶ ಉದ್ಧಾರಕ್ಕೆಂದು ಹುಟ್ಟಿದ ಮಗುವಿಗೆ ತೀರಿಹೋದ ಗಂಡನ ಹೆಸರಿಡಬೇಕೆಂದು ಮನಸ್ಸಿನಲ್ಲಿ ಒಮ್ಮೆ ಅನಿಸಿದರೂ ವಂಶದ ಹಿರಿಯರಾದ ತಿಮ್ಮಪ್ಪಣ್ಣ ಭಟ್ಟರ ಹೆಸರಿಡುವುದೇ ಒಳ್ಳೆಯದೆಂದು ಮಗ ಕೃಷ್ಣನಿಗೆ ಸೂಚಿಸಿದರು. ಆದರೆ ಕೃಷ್ಣನ ಮನಸ್ಸಿನಲ್ಲಿಯೂ ಅಪ್ಪಯ್ಯನ ಹೆಸರಿಡುವುದೇ ಸೂಕ್ತ ಅನಿಸಿತ್ತು. ಕಡೆಗವನು ಯೋಚಿಸಿ ತಾತನ–ಅಪ್ಪನ ಹೆಸರನ್ನು ಸೇರಿಸಿ ತುಸು ವಿಚಿತ್ರವಾದರೂ ತಿಮ್ಮಪ್ಪ ನರಸಿಂಹ ಪ್ರಸಾದ ಎಂದು ಇಡಲು ನಿರ್ಧರಿಸಿದ. ಮಗು ಹುಟ್ಟಿದ ಹತ್ತನೆಯ ದಿನಕ್ಕೇ ಔಪಚಾರಿಕವಾಗಿ ನಾಮಕರಣವನ್ನೂ ನೆರವೇರಿಸಿಬಿಟ್ಟರು–ಬಂದವರು ಮಗು ಹಾಗಿದೆ, ಹೀಗಿದೆ ಎಂದು ಹೋಲಿಸಿನೋಡಿದರು. ಕೃಷ್ಣನ ಕಡೆಯವರು ಇವಳ ವಂಶದವರನ್ನು ಹೋಲಿಸಿ ನೋಡಿದರೆ ಸುಭದ್ರೆಯ ಕಡೆಯವರು ಅವಳ ವಂಶದ ಹಿರಿಯರನ್ನು ಹೆಸರಿಸಿದರು. ನಿಜವೆಂದರೆ ಇನ್ನೂ ಯಾವುದೇ ಸ್ಪಷ್ಟ ಆಕಾರ ಪಡೆದಿರದಿದ್ದ ಮಗು ಕಪ್ಪಗೆ ಮಿರಿಮಿರಿ ಮಿಂಚುತ್ತಿತ್ತು – ಮಾತ್ರವಷ್ಟೇ !

ಅಳಿಯ ಹಟಮಾಡಿ ಹೆರಿಗೆ ನಮ್ಮಲ್ಲೇ ಆಗಲಿ ಎಂದು ಪಟ್ಟುಹಿಡಿದು ಕೂತಿದ್ದರಿಂದ ಸುಭದ್ರೆಯ ತಂದೆ ಅವಳ ಅಮ್ಮನನ್ನು ಹೆರಿಗೆಯ ವಾರಕ್ಕೆ ಮೊದಲು ದಾವಣಗೆರೆಯಿಂದ ಮಲ್ಲಿಗೆಹಳ್ಳಿಗೆ ಕಳುಹಿಸಿದ್ದರು. ಸುಭದ್ರೆ–ಅಮ್ಮನ–ಅತ್ತೆಯ ಆರೈಕೆಯಲ್ಲಿ ಒಂದುದಿನ ಮಧ್ಯಾಹ್ನ ಕೃಷ್ಣತೋಟಕ್ಕೆ ಹೋದಾಗ ಆತನ ಹೆಸರನ್ನು ಹೆರಿಗೆ ನೋವಲ್ಲಿ ಕನವರಿಸುತ್ತಲೇ ಗಂಡುಮಗುವನ್ನು ಹೆತ್ತುಬಿಟ್ಟಿದ್ದಳು. ತೋಟದಲ್ಲಿ ತೆಂಗಿಗೆ ಮಡುಕಟ್ಟಿ, ನೀರು ಸುರಿಯುತ್ತಿದ್ದ ಕೃಷ್ಣನಿಗೆ ಈ ವಿಷಯ ಮನೆಯ ಆಳೊಬ್ಬ ಬಂದು ಹೇಳಿದಾಗ, ತಲೆಗೆ ಕಟ್ಟಿದ ಅಂಗವಸ್ತ್ರ ಸಹ ಬಿಚ್ಚದೆ, ಕಾಲಿಗಂಟಿದ್ದ ಕೆಸರಿಗೆ ನೀರುಹಾಕಿ ತೊಳೆದುಕೊಳ್ಳದೆ ಮನೆಗೆ ದೌಡಾಯಿಸಿದ್ದ. ದಾರಿಯಲ್ಲಿ ಕೆಲಸವಿಲ್ಲದೆ ಬೀಡಿ ಸೇದುತ್ತ ಕೂತ ರಿಕಾಮಿಗಳು ಕೃಷ್ಣಯ್ಯ ಹೀಗೆ ದಿಕ್ಕೆಟ್ಟವನಂತೆ ಓಡುವುದನ್ನು ಕಂಡು ಸೇದುವ ಬೀಡಿಹೊಸಕಿ, ಇದ್ದ ಹೊಗೆಯನ್ನು ಬಾಯಲ್ಲೇ ಬಿಟ್ಟು ಅವನ ಹಿಂದೆ ಓಡಿ ಅವನ ಮನೆತಲುಪಿ ಖುಷಿಯ ವಿಚಾರ ತಿಳಿದು ಥತ್ ಅವನವ್ನ

–ಎಂದು ತಮ್ಮನ್ನು ತಾವೇ ಜರಿದುಕೊಂಡಿದ್ದರು. ಅಲ್ಲಿಂದ ಬರುವಾಗ ಕೃಷ್ಣ ಖುಷಿಯಾಗಿ ಎಲ್ಲರಿಗೂ ಕೊಬ್ಬರಿ–ಸಕ್ಕರೆಯೊಂದಿಗೆ ಬೀಡಿಗಾಗಿ ದುಡ್ಡು ಕೊಟ್ಟಾಗಲೂ ಸಹ ಅವರ ಪ್ರತಿಕ್ರಿಯೆ–ಥತ್ ಅವನವ್ವನ್ ಎಂಬುದಾಗಿತ್ತು: ಆದರೆ ಮೊದಲ ಉದ್ಗಾರ ಪೆಚ್ಚಾದುದ್ದಕ್ಕೆ, ಇನ್ನೊಂದು ಸಂತೋಷಕ್ಕೆ !

ಗೋದಾವರಿಬಾಯಿಗೆ ಈಗ ಇನ್ನೊಂದು ರೀತಿಯ ಚಿಂತೆ ಅಂಟಿ ಕುಳಿತಿತ್ತು. ನಾಮಕರಣಕ್ಕೆಂದು ಬಂದವರಲ್ಲಿ ಯಾರೋ ಮಗುವನ್ನು ನೋಡಲು ತೊಟ್ಟಿಲಿಗೆ ಹಣುಕಿ– 'ಮುಖ ಲಕ್ಷಣವೆಲ್ಲ ನಾಣೀಯ ಹಾಗೆ ಅಲ್ವರಾ ?' ಎಂದು ಮಾತೊಂದನ್ನು ಒಗೆದು ಹೋಗಿದ್ದರು. ಗೋದಾವರಿಬಾಯಿಯ ಮನಸ್ಸಿನ ದುಗುಡ ಹೆಚ್ಚಿಸಲು : ಹಳೆಯ ನೆನಪುಗಳನ್ನು ಕೆದಕಲು ಆ ಮಾತು ಸಾಕಾಗಿತ್ತು. ಎಲ್ಲಿ ಈ ಹಸುಗೂಸು ತಮ್ಮ ಮುಂದೆಯೇ ನಡಿಗೆ ಕಲಿತು, ಮಾತು ಕಲಿತು, ವ್ಯವಹಾರ ಜ್ಞಾನ ಕಲಿತು ಕಡೆಗೆ ತಮಗೇ ಬುದ್ಧಿವಾದ ಹೇಳುವ ಹಾಗಾಗಿ, ತಮ್ಮನ್ನೆಲ್ಲ ಮರೆತು ಬಹುದೂರ ಹೋಗಿ ಬಿಡುತ್ತದೋ ಎಂಬ ಭೀತಿ ಅವರಿಗೆ. ಅಂಥ ಆತಂಕದ ಗಳಿಗೆಯಲ್ಲಿ ಮಾಡಲೇನೂ ತೋಚದೆ ; ದೇವರ ಮುಂದೆ ಹಚ್ಚಿಟ್ಟ ಶಾಂತ ಪ್ರಭೆಯ ನಂದಾದೀಪವೂ ನೆಮ್ಮದಿ ತಾರದೆ ಖತಿಗೊಂಡು ಕುಳಿತು ಬಿಡುತ್ತಿದ್ದರು. ಮಗುವಿನ ಅಳುವಿನ ಸದ್ದೋ ಇಲ್ಲ ಸುಭದ್ರೆ ಹೊರನಿಂದ ಇಳಿವಾಗಿನ ಸದ್ದೋ ಅವರನ್ನೆಚ್ಚರಿಸಬೇಕು. ಇದ್ದಕ್ಕಿದ್ದ ಹಾಗೆ ಲವಲವಿಕೆ ಕಳೆದುಕೊಂಡು ಬಿಡುತ್ತಿದ್ದ ಬೀಗಿತ್ತಿಯ ಸುಭದ್ರೆಯ ತಾಯಿ ಕಂಡಾಗ ತನ್ನ ಮಗಳೇನು ತಪ್ಪು ಮಾಡಿದಳೋ– ಅಥವಾ ತಮ್ಮಿಂದೇನಾದರೂ ಆಗಬಾರದ್ದು ಘಟಿಸಿತೋ ಎನ್ನುವ ಆಲೋಚನೆ ಮುತ್ತುವುದು. ಆದರೆ ಇದೆಲ್ಲ ಎಷ್ಟು ಹೊತ್ತು ? ಕೆಲಸದ ಮೇಲೆ ಹಳ್ಳಿಗೆ ಹೋಗಿಯೋ, ಇಲ್ಲ ಜಮೀನು ಕಾರ್ಯದಿಂದಲೋ ಕೃಷ್ಣ ಮರಳಿ ಮನೆಗೆ ಬಂದನೆಂದರೆ ಎಲ್ಲ ಹಗುರವಾಗಿ ಬಿಡುತ್ತಿತ್ತು. ಮಧ್ಯಾಹ್ನದ ಊಟವನ್ನು ಎಲ್ಲರೂ ಒಟ್ಟಿಗೆ ಕುಳಿತೇ ಮಾಡುತ್ತಿದ್ದರು. ಮಗ ತೋಟ–ಹೊಲದಲ್ಲಿ ನಿಗಾ ವಹಿಸಿ ಹೆಚ್ಚಿಗೆ ಅನ್ನುವಷ್ಟು ಕಾಳು–ಕಡಿ ಮನೆಯ ವಖಾರ ಸೇರಿ, ಒಂದಿಷ್ಟು ನಗದು ಹಣ ಅಡುಗೆ ಮನೆಯ ಪೆಟ್ಟಿಗೆಯಲ್ಲಿ ಸೇರಿ ಗೋದಾವರಿಬಾಯಿಗೆ ಮಗನ ಬಗ್ಗೆ ವಿಚಿತ್ರ ಹೆಮ್ಮೆ. ಆಗೆಲ್ಲ ಹಳೆಯ ನೋವನ್ನವರು ಮರೆತು ಬಿಡುವರು. 'ಯಾವಾಗಲೂ ಜಮೀನು–ಶಾಸುಭೋಗಿಕೆ ಅಂತ

ನಿನ್ನ ಲೋಕದಲ್ಲಿಯೇ ಸುತ್ತ ಬೇಡವ್ವೋ ಕಂದಾ ! ಮನೆ ಕಡೆ, ಹೆಂಡತಿ-ಮಗುವಿನ ಕಡೆಯೂ ಲಕ್ಷ್ಯಕೊಡು. ಭಾಗೀರಥಿಯಿಂದ ಸುದ್ದಿಯೇ ಇಲ್ಲ. ಟಪಾಲಾದರೂ ಹಾಕು....' ಎನ್ನುವರು. ಕೃಷ್ಣ 'ಅಮ್ಮ ತನ್ನ ನೆಮ್ಮದಿಗಾಗಿ ಹೇಳಿಕೊಳ್ಳುತ್ತಾಳಷ್ಟೇ, ಆಕೆಗೇನು ಗೊತ್ತಿಲ್ಲವೆ ತಾನೆಂದೂ ಮನೆಯನ್ನು ಕಡೆಗಣಿಸಿದವನಲ್ಲವೆಂದು....' ಅಂದುಕೊಂಡು ನಕ್ಕು ಬಿಟ್ಟು 'ಆಯಿತೇ ಅಮ್ಮಾ' ಎಂದು ತಲೆ ಹಾಕಿ ಬಿಡುವನು. ಮೊದಲ ಮಗುವಿನ ತಂದೆಯಾದಂದಿನಿಂದ ಅವನಿಗೇನೋ ಒಂಥರದ ಹೆಮ್ಮೆ. ಕಾಡುದಾರಿಯಲ್ಲಿ ಹೋಗುವಾಗ, ತೋಟದಲ್ಲಿ ಪಾತಿಕಟ್ಟುವಾಗ ; ಹೊಲದಲ್ಲಿ ಆಳುಗಳೊಂದಿಗೆ ಮಾತಾಡುತ್ತ ನಿಂತಾಗ ಇದ್ದಕ್ಕಿದ್ದ ಹಾಗೆ ಮಾತಿಲ್ಲದ ಮಗು ಕೈಕಾಲು ಬಡಿಯುವುದು, ಅರೆಗತ್ತಲು ತುಂಬಿದ ಕೋಣೆಯಲ್ಲಿ ಸುಭದ್ರೆ ಮಲಗಿರುವುದು ಕಣ್ಣಿಗೆಕಟ್ಟಿ ಮನಸ್ಸು ಪುಳಕಿತವಾಗುತ್ತಿತ್ತು. ಅವನಷ್ಟಕ್ಕೆ ಅವನು ನಗುವುದನ್ನು ಕಂಡು ಬೇಸಾಯಗಾರ ಹೆಣ್ಣು-ಗಂಡಾಳುಗಳಿಗೆ ನಗು.

o o o

ಈ ವೇಳೆಯಲ್ಲಿ ಕೃಷ್ಣ ಇನ್ನೊಂದು ತುಂಟ ಕೆಲಸ ಮಾಡಿದ : ಮೂವತ್ತು ದಾಟಿದರೂ ಮದುವೆ ಬೇಡ ಎನ್ನುತ್ತಿದ್ದ ; ಅಜನ್ಮ ಬ್ರಹ್ಮಚಾರಿಯಂತೆಯೇ ಇದ್ದು ಬಿಡುವೆ ಎನ್ನುವಂತಿದ್ದ ಕೃಷ್ಣ.

ಮಗುವಿಗೆ ಮೂರು ತಿಂಗಳು ತುಂಬಿತ್ತು. ಕೂಸು—ಹಸಿ ಮೈ ಬಾಣಂತಿ ತಮ್ಮ ಕೋಣೆ ಬಿಟ್ಟು ಪಡಸಾಲೆ, ಹಿತ್ತಲು, ಅಡುಗೆ ಮನೆ ಅಂತೆಲ್ಲ ಓಡಾಡಲು ಅದಾಗ ಪ್ರಾರಂಭಿಸಿದ್ದರು. ಸುಭದ್ರೆ ಬೇಡವೆಂದರೂ ಅತ್ತಿಗೆ ತರಕಾರಿ ಹೆಚ್ಚುವುದು ಅದು-ಇದು ಎಂದು ಸಹಾಯ ಮಾಡಲು ಹೋಗುವಳು. ಈ ಇಂಥ ವೇಳೆ ಕಳೆದು ಮತ್ತೊಂದು ತಿಂಗಳಾಗುವಲ್ಲಿ ಸುಭದ್ರೆ-ಕೃಷ್ಣ ಇಬ್ಬರೂ ನಾಚಿಕೆಯಲ್ಲಿ ತುಸು ತಲೆ ಮರೆಯಿಸುವ ಘಟನೆ. ಮಧ್ಯಾಹ್ನದ ಊಟವಾದ ಮೇಲೆ ತೋಟಕ್ಕೆ ಹೋಗುವೆ ಎಂದು ಕೃಷ್ಣ ಅಂದು ಹೊರಟು ಬಿಟ್ಟಿದ್ದ. ಹೊಸ ಮನೆಯ ಜಗುಲಿ ಕಟ್ಟೆಗೆ ಮಲಗಿ-ಅಲ್ಲಿಂದ ಕಾಣುವ ತೋಟವನ್ನು ನೋಡುತ್ತ ಒಂದು ಸಣ್ಣ ನಿದ್ದೆ ತೆಗೆಯುವುದು ಕೃಷ್ಣ

ಹಳ್ಳಿಯಲ್ಲಿದ್ದಾಗಿನ ಅವನ ದೈನಿಕಗಳಲ್ಲೊಂದಾಗಿತ್ತು. ಕೃಷ್ಣ ಮನೆಬಿಟ್ಟು ಇನ್ನೂ ಅರ್ಧದಾರಿಯಲ್ಲಿದ್ದಿರಬೇಕು. ಅಡ್ಡಾಗುವ ಎಂದು ಕೋಣೆಗೆ ಹೋಗಿ ಮಂಚಕ್ಕೆ ಒರಗಿದ್ದ ಸುಭದ್ರೆಗೆ ಹೊಟ್ಟೆಯಲ್ಲೆಲ್ಲ ತೊಳೆಸಿದ ಹಾಗಾಗಿ, ಉಂಡದ್ದು ಎದೆಗೆ ಬಂದು, ಬಾಯಿಗೆ ಬಂದು ಹುಳಿಹುಳಿಯಾದಂತಾಗಿ, ಮಂಚವಿಳಿದು ಬಚ್ಚಲಿಗೆ ಬಾಯಿ ಇಟ್ಟಳೋ ಇಲ್ಲವೋ ತಿಂದ ಅನ್ನದ ಅಗಳು ನೀರು ಬಕಬಕನೆ ಹೊರಬಂತು. ಗೋದಾವರಿಬಾಯಿ ಗಾಬರಿಯಲ್ಲಿ ಓಡಿ ಬಂದು ಸೊಸೆಯನ್ನು ಹಿಡಿದುಕೊಂಡರು. ಪಿತ್ತವಾಗಿರಬೇಕೆಂದು ಕರಿಬೇವು-ಶುಂಠಿ ಹಾಕಿ, ತುಸು ಹೆಚ್ಚಿಗೆ ಹಾಲು-ಬೆಲ್ಲ ಹಾಕಿ ಕಷಾಯ ಮಾಡಿಕೊಟ್ಟರು. ಸಂಜೆ ಕೃಷ್ಣ ಬಂದಾಗ ವಿಷಯ ತಿಳಿಸಿ 'ಮೂರು-ನಾಕು ತಿಂಗುಳಿಂದ ಬಾಣಂತಿ ಮನೆಯಲ್ಲೇ ಇತ್ತು ನೋಡು, ಪಾಪ ಪಿತ್ತವಾಗಿದೆ' ಅಂದರು. ಆದರೆ ಮುಂದಿನ ನಾಲ್ಕೈದು ದಿನ ಹೀಗೆ ವಾಂತಿಯಾಗುವುದು-ಹುಳಿ-ಖಾರದ ಖಾದ್ಯವನ್ನು ಸುಭದ್ರೆ ಹೆಚ್ಚು ಹೆಚ್ಚು ಬಯಸುವುದು ಕಂಡು ಅವರಿಗೆ ನಿಜ ಸ್ಥಿತಿ ಅರಿವಾಯಿತು. ಅವತ್ತು ಕೃಷ್ಣ ಮನೆಗೆ ಬಂದಾದ ಮೇಲೆ 'ಇದೇನೋ ಕೃಷ್ಣಾ ನೀನು ಮಾಡಿದ್ದು ? ಕಳೆದ ವಾರವಿನ್ನೂ ನಿನ್ನ ಅತ್ತೆಯನ್ನು ಊರಿಗೆ ಕಳಿಸಿಬಿಟ್ಟು ತಪ್ಪು ಮಾಡಿದೆ ಬಿಡು, ಇನ್ನೊಂದು ವರ್ಷ ಅವರು ಇಲ್ಲೇ ಇದ್ದರೆ ಚೆನ್ನಿತ್ತು. ನನಗೂ ವಯಸ್ಸಾಗಿ ಸುಧಾರಿಸುದು ಕಷ್ಟ ನೋಡು....' ಎಂದು ನಗುತ್ತ ನುಡಿದರು.

ಕೃಷ್ಣನಿಗೆ ಅಮ್ಮನ ವಾಚ್ಯಾರ್ಥ ಆಗದೆ ಮಿಕಿ ಮಿಕಿ ನೋಡುವಾಗ ಸುಭದ್ರೆ ಕೋಣೆಯಲ್ಲಿ ನಾಚಿಕೆಯಿಂದ ಮುಸುಕು ಹೊದ್ದಿದ್ದಳು. 'ಹಾಗಂದ ರೇನೇ, ಅಮ್ಮ ?' ಎಂದಾಗ 'ನಿನ್ನ ಹೆಂಡತಿಗೆ ಮತ್ತೆ ಬಯಕೆ ಸುರುವಾಗಿದೆ ಯಪ್ಪಾ, ದಿನಗಳು ಪ್ರಾರಂಭವಾಗಿವೆ....' ಎಂದು ಗೋದಾವರಿಬಾಯಿ ಮರು ಉತ್ತರ ಕೊಟ್ಟದ್ದೇ ಕೃಷ್ಣನಿಗೆ ಮುಖಕೊಟ್ಟು ಅಮ್ಮಳೊಂದಿಗೆ ಮಾತಾಡಲು ಮತ್ತೂ ಸಂಕೋಚವಾಗಿ ಕೈಹೊಸೆಯುತ್ತ ನಿಂತುಬಿಟ್ಟ. ಗೋದಾವರಿ ಬಾಯಿ ಕೇಳಬೇಕೆ ಕೃಷ್ಣನ ಅಮ್ಮ ; ನರಸಯ್ಯನವರ ಹೆಂಡತಿ. ಲೌಕಿಕ ಗೊತ್ತಿಲ್ಲದ ಹೆಂಗುಸು ಅನ್ನುವುದು ಬಿಟ್ಟರೆ ಮಾತಿನಲ್ಲಿ ಚುರುಕು- 'ಬಹಳ ಚೆನ್ನಾಗಿ ಕೈ ಹೊಸೆಯುತ್ತೀಯೋ ಕೃಷ್ಣಾ' ಅಂದರು. ತಮಗಾದ ಖುಷಿ ತೋರಿಸಿಕೊಳ್ಳಲು ಸಕ್ಕರೆ ತಂದು ಅವನ ಕೈಗೆ ಹಾಕಿ 'ಇರಲಿ ಬಿಡೋ

ಸುಮ್ಮನೆ ಅಂದೆ. ಮನೆಬೆಳಗಿಸಲು ಎಷ್ಟು ಮಕ್ಕಳಾದರೂ ಕಡಿಮೆಯೇ. ದೇವರು ಕೊಡುವಾಗ ಬೇಡವೆನ್ನಬಾರದು, ಶುಭವಾಗಲಿ ಅನ್ನೊ....' ಎಂದರು. ಕೃಷ್ಣ ನಾಚಿಕೆಯಲ್ಲಿಯೇ ಸಕ್ಕರೆ ಬಾಯಿಗೆ ಹಾಕಿಕೊಂಡು ಸುಭದ್ರೆಯ ಕೋಣೆ ಸೇರಿದ. ಸುಭದ್ರ ಮೈಮೇಲೆ ಹೊದ್ದಿದ್ದ ತೆಳ್ಳನೆಯ ಸೀರೆಯ ಅಂಚಿನ ಬಿಡಿಬಿಡಿ ದಾರಗಳ ಮಧ್ಯದಿಂದ ಅವನ ಮುಖ ನೋಡಿದಳು. ಗಂಡನಿಗೂ ಮುಖ ತೋರಿಸದಷ್ಟು ನಾಚಿಕೆ ಅವಳನ್ನಾವರಿಸಿತ್ತು. ಕೃಷ್ಣ ಮಂಚದ ಮೇಲೆ ಕುಳಿತು ಮೆಲ್ಲಗೆ ಅವಳ ಹೊಟ್ಟೆಯ ಮೇಲೆ ಕೈಯಿಟ್ಟಾಗ 'ಥೂ ! ನೀವು ಕೆಟ್ಟೋರು !' ಅಂದು ಮತ್ತೆ ಸೀರೆ ಮುಖದ ತುಂಬ ಎಳೆದುಕೊಂಡಳು. 'ಎಷ್ಟು ಕೆಟ್ಟೋನು' ಎನ್ನುತ್ತ ಕೃಷ್ಣನೂ ನಿಧಾನಕ್ಕೆ ಸೀರೆ ಸರಿಸಿ, 'ಏನು ಮಾಡಲಿ ನೀನೇ ಹೇಳು ಮತ್ತೆ ? ನೀನು ಹಾಗಿದ್ದೀಯಾ ? ಹೋಗಲಿ ನಾನಾದರೂ ತುಂಬ ಉದ್ದವಿದ್ದರೆ ಮಣ್ಣು ಮುಕ್ಕಬಹುದಿತ್ತು, ಆದರೆ ನಿಂಗಿಂತ ಹೆಚ್ಚೇನೂ ಉದ್ದವಿಲ್ಲವಲ್ಲ. ಹೀಗಾಗಿ ಸಕ್ಕರೆ ಮುಕ್ಕಿದೆ– ಅದಕ್ಕೆ ಹೀಗಾಯ್ತು....' ಎಂದು ಅವರಿಬ್ಬರಿಗೇ ಅರಿವಿದ್ದ ಒಗಟಿನ ಮಾತಾಡಿದ. ಸುಭದ್ರೆಗೆ ನಾಚಿಕೆ– ಕೋಪ ಒಟ್ಟೊಟ್ಟಿಗೆ ಆಗಿ 'ಮಾಡುದೆಲ್ಲಾ ಮಾಡೀ....ಥೂ! ನೀವೀಗ ಹೋಗಿ ಮತ್ತೆ' ಎಂದು ಮತ್ತೆ ಸೆರಗು ಹೊದ್ದಳು. 'ಸರಿ– ಕತ್ತಲಾದ್ಮೇಲೆ ಬರ್ತೀನಿ' ಎಂದು ಕೃಷ್ಣ ಕೋಣೆಯ ಬಾಗಿಲು ದಾಟಿದಾಗ ಒಳಗೊಳಗೆ ತುಂಬ ಹೆಮ್ಮೆಯೆನಿಸಿ ಅವನ ಬೆನ್ನನ್ನೇ ನೋಡಿ, ಮತ್ತೊಮ್ಮೆ– ಹೊಟ್ಟೆಯನ್ನು ಮುಟ್ಟಿಕೊಂಡು ನೋಡಿ, ಮತ್ತೊಮ್ಮೆ ಮಗ್ಗುಲಿಗೆ ತಿರುಗಿ ತೊಟ್ಟಿಲಲ್ಲಿ ಮಲಗಿದ್ದ ಮಗುವನ್ನು ನೋಡಿ ಕತ್ತಲಾಗಲಿ ಎಂದು ಕಣ್ಮುಚ್ಚಿದಳು.

ೲ ೲ ೲ

ತೊಟ್ಟಿಲಲ್ಲಿಯೇ ಕಾಲು– ಕೈ ಬಡಿಯುತ್ತಿದ್ದ ಕೂಸು ಬಗಲಿಗೆ ಬಂದು, ಅಮ್ಮನೊಡನೆ, ಅಜ್ಜಿಯೊಡನೆ, ಅಪ್ಪನೊಡನೆ ಅರಿಯದ ಭಾಷೆಯಲ್ಲಿ ಮಾತಾಡಿ, ಬಗಲಿಂದ ಕೆಳಗಿಳಿದು ಮನೆಯೆಲ್ಲ ಹರಿದಾಡಿ ರಂಪವೆಬ್ಬಿಸಿ, ಅತ್ತು ಕರೆದು, ಏನೇನೆಲ್ಲ ಮಾಡಿ ಆರೇಳು ತಿಂಗಳು ಕಳೆಯಿತು. ಸುಭದ್ರೆಯಲ್ಲಿದ್ದ

ಮತ್ತೊಂದು ಮಗು ಈ ವೇಳೆಗಾಗಲೇ ಹೊರಕ್ಕೆ ಬರಲು ತವಕಿಸುತ್ತಿತ್ತು. ಗೋದಾವರಿಬಾಯಿ ಇನ್ನೊಂದು ಬಾಣಂತನಕ್ಕೆ ಹುರುಪಿನಿಂದಲೇ ಸಜ್ಜಾಗಿದ್ದರು. ಸುಭದ್ರೆಯ ತಾಯಿಯೂ ಹೆರಿಗೆಯ ಆಸುಪಾಸು ಬರುವುದಾಗಿ ಸುದ್ದಿ ಕಳಿಸಿದ್ದರು.

ಆ ಕಡೆ ತೀರ್ಥಹಳ್ಳಿಯಿಂದ ಈಗ ಮಳೆಗಾಲವಾದ್ದರಿಂದ ಹೆರಿಗೆಗೆ ಬರುವುದು ಕಷ್ಟವಾದರೂ ಮೃಗಶಿರಾ ಮಳೆ ಮುಗಿದಾದ ಮೇಲೆ, ಬಿತ್ತನೆ ಕಾರ್ಯ ಮುಗಿಯುವುದರಿಂದ ಸುರೇಂದ್ರನೊಂದಿಗೆ ಬಂದೇ ಬರುವುದಾಗಿ ಭಾಗೀರಥಿ ತನ್ನ ಗಂಡನಿಂದ ಹೇಳಿ ಬರೆಯಿಸಿದ ಕಾಗದವನ್ನು ಅಣ್ಣನ ಮನೆಗೆ ಕಳಿಸಿದ್ದಳು. ಹಾಗೆ ಯಾರ ಅವಶ್ಯಕತೆಯಿಲ್ಲದೆ ಎರಡನೆಯ ಹೆರಿಗೆಯನ್ನು ಮಾಡಬಹುದಾಗಿದ್ದರೂ ಹತ್ತಿರದವರೆಲ್ಲ ಇಂಥ ಸಂತಸದ ಗಳಿಗೆಯಲ್ಲಿ ಬಳಿಯಲ್ಲಿ ಇದ್ದು ಆ ಖುಷಿಯನ್ನು ಹಂಚಿಕೊಳ್ಳಬೇಕೆಂಬ ಆಶೆ ಸಾಮಾನ್ಯವಾಗಿ ಎಲ್ಲರಿಗೂ ಇರುವಂತೆ ಗೋದಾವರಿಬಾಯಿಗೂ ಇತ್ತಷ್ಟೇ. ಈಗವರಿಗೆ ಮೊದಲಿನ ಹಾಗೆ ಚಿಂತೆಗಳು ಕಾಡುವುದಿಲ್ಲ. ದನಿಯಿರದ ನೋವುಗಳು ಎದೆಯಲ್ಲಿ ಚಿಟುಗು ಮುಳ್ಳಾಡಿಸುವುದಿಲ್ಲ. ಮೊಮ್ಮಗನೊಂದಿಗೆ ಅವನದೇ ಭಾಷೆಯಲ್ಲಿ ಮಾತಾಡುತ್ತ, ಸೊಸೆಯ ಬೇಕು-ಬೇಡ ನೋಡಿಕೊಳ್ಳುತ್ತ, ಮನೆಯ ಓರಣ, ಸಾರಿಸು, ಗುಡಿಸು ಎಂದು ಕೈಗೆ ಬಂದ ಕೆಲಸವೆಲ್ಲ ಮಾಡುತ್ತ ಯಾವ ಬೇಸರವೂ ಇಲ್ಲದೆ ಅವರ ದಿನ ಕಳೆದು ಹೋಗಿಬಿಡುತ್ತಿತ್ತು. ಅವರಿಗೆ ಈ ದಿನಗಳಲ್ಲಿ ನಾರಾಯಣನ ನೆನಪು ಬಂದಿದ್ದೂ ಎಲ್ಲೋ ಅಪರೂಪಕ್ಕೆ. ಯಾರೋ ಅಂದ ಮಾತು ತಲೆಯಲ್ಲಿ ಕೂತು ಗುಂಗಿಹುಳದ ಹಾಗೆ ಕೊರೆದು-ಸೊಟ್ಟ ಕಾಲಿಡುತ್ತ, ಬಿದ್ದು ಮತ್ತೆ ನಡೆಯಲು ತೊಡಗುವ ಮಗುವಿನ ಮುಖ ಒಮ್ಮೊಮ್ಮೆ ತಟ್ಟನೆ ನಾಣಿಯ ಹಾಗೆ ಕಂಡಾಗ ಮಾತ್ರ. ಪ್ರಾಯಶಃ ಅತಿ ಗಾಢವಾಗಿ ಉನ್ಮಾದದಂತಹ ಸ್ಥಿತಿಯಲ್ಲಿ ಮೈಗೆ ಹಚ್ಚಿಕೊಂಡ ವಸ್ತುಗಳೂ ಸಹ ಅವುಗಳಿಂದ, ಅವುಗಳ ವಾಸನೆ-ರಸ-ರುಚಿಗಳಿಂದ ದೂರ ಉಳಿದಾಗ, ಅವುಗಳ ಬಗ್ಗೆ ನಿರ್ಲಿಪ್ತ ಮೌನ ತಾಳಿದಾಗ ಹೆಚ್ಚು ಸ್ಪಷ್ಟವಾಗಿ, ವಸ್ತುನಿಷ್ಠವಾಗಿ ಕಾಣತೊಡಗಿ- ಇರುವುದರ ಬಗ್ಗೆ ಒಲವುಕ್ಕಿಸುವಂತೆ ಮಾಡುತ್ತಾವೇನೋ. ಗೋದಾವರಿಬಾಯಿಗೆ ಆದದ್ದೂ ಅದೇ : ಇಲ್ಲದ ನಾಣಿ ನೋವು ಅವರಿಗೇ ಹಲವೊಮ್ಮೆ ಆಶ್ಚರ್ಯವಾದದ್ದಿದೆ : ನಾಣಿ ತಮ್ಮ ಮುಂದೆಯೇ

ಇದ್ದಾಗ ; ದಿನದಿನಕ್ಕೂ ಬೆಳೆದು ದೊಡ್ಡವನಾಗುತ್ತಿದ್ದಾಗ ಅವನಿಗಿಂತ ತಮಗೆ ಹೆಚ್ಚು ಸಲಿಗೆ ಇದ್ದುದು ಕೃಷ್ಣನೊಂದಿಗೆ. ಆದರೆ ದಿಢೀರನೆ ನಾಣಿ ನಮ್ಮೊಂದಿಗಿಲ್ಲಎಂಬ ಭಾವನೆ ಬಂದದ್ದೇ ಅವನ ಬಗ್ಗೆ ಮನಸ್ಸು ಹೇಗೆ ತವಕಿಸಲು ಆರಂಭಿಸುತ್ತದಲ್ಲಾ ಎಂದು. ಆಗೆಲ್ಲ ಎದುರಿಗಿದ್ದಾನೆ ಎನ್ನುವ ಸಮಾಧಾನವಿದ್ದಿರಬೇಕು. ಮೈಸೂರಿನಲ್ಲಿದ್ದಾಗಲಾಗಲಿ, ಸರ್ಕಾರಿ ಖಾತೆಯಲ್ಲಿ ಅರಸೀಕೆರೆಯಲ್ಲಿದ್ದಾಗಲಾಗಲಿ ದೂರವಿದ್ದಾನೆ ಅಂತನಿಸಿರಲೇ ಇಲ್ಲ. ಎಂದಿದ್ದರೂ ನಮ್ಮವನೇ ಅನ್ನುವ ಭರವಸೆ ಇತ್ತು. ಈಗ ಹಾಗಿಲ್ಲದಿರುವುದು ನನ್ನ ಹಳಹಳಿಕೆಗೆ ಕಾರಣವಿರಬೇಕು ಎಂದು ತಮ್ಮಷ್ಟಕ್ಕೇ ತಾವೇ ಅಂದುಕೊಳ್ಳುವರು. ಮರುಕ್ಷಣ ನಾಣಿ ನಾಣಿಯೇ, ಕೃಷ್ಣ ಕೃಷ್ಣನೇ– ಇವನು ಅವನಾಗುವುದಾಗಲಿ ; ಅವನು ಇವನಾಗುವುದಾಗಲಿ ಹೇಗೆ ಸಾಧ್ಯ ? ತುಸು ದಾರಿ ತಪ್ಪಿದವನು, ಮನೆಯ ನೆದರಿಲ್ಲದ ಬೇಜವಾಬ್ದಾರಿ ಎಂದ ಮಾತ್ರಕ್ಕೆ ಅವನನ್ನೇಕೆ ಕೆಟ್ಟವನೆಂದು ಅಂದುಕೊಳ್ಳಬೇಕು ? ಅವನನ್ನು ಹೆತ್ತದ್ದೂ ಈ ಹೊಟ್ಟೆಯೇ ಅಲ್ಲವೆ ? ಇನ್ನೊಂದು ರೀತಿ ಆಲೋಚನೆ ಮಾಡುವರು. ಏನೆ ಅಂದರೂ ಅವರ ತಾಯಿಕರುಳು ಆತನ ತಪ್ಪನ್ನೆಲ್ಲ ಮನ್ನಿಸಿ ಬಿಡುತ್ತಿತ್ತು : ಎಂದಾದರೂ ಬಂದೇ ಬರುವನೆಂದು ನಿರೀಕ್ಷೆಯಲ್ಲಿತ್ತು.

ನಿರೀಕ್ಷಿಸಿದಂತೆಯೇ ಸುಭದ್ರೆಗೆ ಹೆಚ್ಚು ತ್ರಾಸದಾಯಕವಲ್ಲದ ಎರಡನೆಯ ಹೆರಿಗೆಯಾಯಿತು. ಈ ಸಲ ಹುಟ್ಟಿದ್ದು ಹೆಣ್ಣು. ಹೆಣ್ಣು ಹುಟ್ಟಿತೆಂದು ಮನೆಯಲ್ಲಿ ಯಾರೂ ತಿರಸ್ಕಾರ ಪಡಲಿಲ್ಲ. ಅವರ ವಂಶದಲ್ಲಿ ಸಂತಾನವೇ ತುಸು ಕಡಿಮೆ– ಅದರಲ್ಲೂ ಹೆಣ್ಣು ಸಂತಾನ. ಆದರೆ ಸಂತಾನ ಕಡಿಮೆಯೆನ್ನುವುದು ಕೃಷ್ಣನ ಮಟ್ಟಿಗೇನೂ ನಿಜವಾಗಿರಲಿಲ್ಲ. ಈ ಸಲದ ಹೆರಿಗೆಯ ನಂತರ ಸುಭದ್ರೆ ಅವನನ್ನು ಮಂಚದಿಂದ ಆದಷ್ಟೂ ದೂರ ನಿಲ್ಲಿಸಿ ಮಾತಾಡಿಸುತ್ತಿದ್ದಳು ! ಜತೆಗೆ ಅಮ್ಮನ ಗೇಲಿಯ ಮಾತುಗಳು ಕೃಷ್ಣನಿಗೆ ಮುಜುಗರ– ಸಂಕೋಚವನ್ನುಂಟುಮಾಡುತ್ತಿದ್ದುದರಿಂದ ಕಳೆದ ಸಲದ ಹಾಗೆ ಈ ಸಲವೂ ಎರಡನೆಯದ್ದರ ನಂತರ ಮೂರನೆ ಬಾಣಂತನಕ್ಕೆ ತಯಾರಾಗುವಂತೆ ಮಾಡಲಿಲ್ಲ!! ಸಂತಾನ ಕಡಿಮೆಯೆನ್ನುವ ಮಾತನ್ನು ಸುಳ್ಳು ಮಾಡಬೇಕೆನ್ನುವ ಛಲವೇನೂ ಅವನಲ್ಲಿ ಇರದಿದ್ದರೂ ತುಸು ಆತುರದ ವ್ಯಕ್ತಿಯಷ್ಟೇ !!

೦ ೦ ೦

ಈಗೀಗ ಮಕ್ಕಳು–ಮರಿ–ಮನೆಯೆಂದು ಹೆಚ್ಚಿನ ವೇಳೆ ಅನಿವಾರ್ಯ ವಾಗಿ ಮನೆಯಲ್ಲಿ ಕಳೆಯಬೇಕಿದ್ದುದರಿಂದ ಅವರೆ ಹೊಲದ–ಅಕ್ಕಡಿಕಾಳಿನ ಬೆಳೆಯ ಜವಾಬುದಾರಿಯನ್ನೆಲ್ಲ ಕೃಷ್ಣ ಹಳೆಯ ಬೇಸಾಯಗಾರ ಕಾಡಜ್ಜನಿಗೆ ವಹಿಸಿ ಬಿಟ್ಟಿದ್ದ. ತೋಟದ ಉಸ್ತುವಾರಿಗಾಗಿ ಹೊಸ ಆಳುಗಳನ್ನು ಖಾಯಂ ಆಗಿ ನೇಮಿಸಿಕೊಂಡಿದ್ದ. ಆತನ ನಿರಂತರ ಶ್ರಮದಿಂದ ತೆಂಗು ಸಾಕಷ್ಟು ಚೆನ್ನಾಗಿಯೇ ಬರುತ್ತಿತ್ತು. ತೆಂಗು ಮಾರಲು- ಸಸಿ ತರಲು, ಗೊಬ್ಬರ- ಬಿತ್ತನೆ ಬೀಜದ ಖರೀದಿ ಎಂದೆಲ್ಲ ಆತ ಇತ್ತೀಚೆಗೆ ಅರಸೀಕೆರೆ-ಹಾಸನ ಸಕಲೇಶ ಪುರ ಎಂದೆಲ್ಲ ತಿರುಗಾಡಬೇಕಾಗುತ್ತಿತ್ತು. ಹಾಸನ–ಸಕಲೇಶಪುರದಲ್ಲಿ ಇವರ ತೋಟದ ತೆಂಗನ್ನು ಖರೀದಿ ಮಾಡಲು ಖಾಯಂ ಮಂಡಿಗಳಿದ್ದರೆ ತರಕಾರಿ ಗಂತೂ ಮೊದಲಿನಿಂದ ಅರಸೀಕೆರೆಯಲ್ಲಿ ಗೊತ್ತಾದ ಮಳಿಗೆಗಳು ಇದ್ದೇ ಇದ್ದವು. ಅರಸೀಕೆರೆಯೆಂದರೆ ಕೃಷ್ಣನಿಗೆ ವಿಶೇಷ ಪ್ರೀತಿ. ವಾರಕ್ಕೊಮ್ಮೆ ಯಾದರೂ ತಾಲೂಕು ಕಛೇರಿಗೆ– ಕೋರ್ಟಿನ ಕೆಲಸಕ್ಕೆ ಎಂದು ಅವ ಅಲ್ಲಿಗೆ ಹೋಗಲೇಬೇಕಾಗುತ್ತಿತ್ತು.

ಈ ಸಲ ಕಾಯಿ ಮಾರಿದ್ದಾದ ಮೇಲೆ ಪ್ರತಿವರ್ಷದಂತೆ ಮನೆಯವರಿ ಗೆಲ್ಲ ಹೊಸ ಬಟ್ಟೆಯನ್ನು ಹಾಸನದಿಂದ ಕೃಷ್ಣ ತಂದಿದ್ದ. ಆದರೆ ಎರಡು ಮಕ್ಕಳು– ಸೊಸೆಯನ್ನಷ್ಟೇ ಮನೆಯಲ್ಲಿ ಬಿಟ್ಟು ಬರಬೇಕಾಗುವುದೆಂಬ ಕಾರಣಕ್ಕೆ ಗೋದಾವರಿಬಾಯಿ ಹಾಸನಕ್ಕೆ ಹೋಗಲಾಗಿರಲಿಲ್ಲ. ಅವರ ಬದಲಿಗೆ ಎರಡನೆ ಕೂಸನ್ನು ನೋಡಿಕೊಂಡು ಹೋಗಲು ಬಂದಿದ್ದ ಭಾಗೀ ರಥೀ–ಸುರೇಂದ್ರ, ಜತೆಗೆ ಸುಭದ್ರೆಯ ತಾಯಿ ಅವನೊಂದಿಗೆ ಜವಳಿ ಖರೀದಿಗೆ ಹೋಗಿದ್ದರು. ಸುಭದ್ರೆಯ ತಾಯಿ ಮಡಿಯೆಂದು ಹಾಸನದ ಪ್ರಸಿದ್ಧ ಕೃಷ್ಣಭವನದಲ್ಲಿ ದೋಸೆ–ಕಾಫಿ ಕುಡಿಯದಿದ್ದರೂ ಕೃಷ್ಣ, ಭಾಗೀರಥಿ ಸುರೇಂದ್ರ ಎರಡೆರಡು ಮಸಾಲೆ ಬೆಣ್ಣೆದೋಸೆ ತಿಂದಿದ್ದರು. ದೋಸೆ ತಿನ್ನು ವಾಗ ಕೃಷ್ಣ ತಂಗಿಗೆ ಹೇಳಿದ್ದ : 'ಇದೇ ಹೊಟೇಲಿನಲ್ಲಿ ದೋಸೆ ತಿಂದೆ ನಿನ್ನ ದೊಡ್ಡಪ್ಪ, ಅಣ್ಣ ಧೀರೇಂದ್ರ ಆಸ್ತಿ ಕರಗಿಸಿದ್ದು....' ಎಂದು. ಆತನ ತಮಾ ಷೆಯ ಮಾತಿನ ಹಿಂದೆ ತಮ್ಮದೇ ವಂಶದವರೊಬ್ಬರು ಐಷಾರಾಮಿನಲ್ಲಿ ನೆಲ ವೆಲ್ಲ ಕರಗಿಸುತ್ತಿರುವುದರ ಬಗ್ಗೆ ನೋವಿತ್ತು. ಪೂರ್ವಜರ ಶ್ರಮ ಷೋಕಿ ನಲ್ಲಿ ವ್ಯಯವಾಗುತ್ತಿರುವುದರ ಬಗ್ಗೆ ತೀವ್ರ ವಿಷಾದವಿತ್ತು.

ಹಾಸನದಿಂದ ಬಂದ ಎರಡು ದಿನಕ್ಕೆ ತಂಗಿ-ಭಾವಮೈದುನ ಹೊರಟು ನಿಂತಾಗ ಕೃಷ್ಣ ಈ ಸಲದಿಂದ ಹೊಸ ಪದ್ಧತಿಯೊಂದನ್ನು ರೂಢಿಗೆ ತಂದ. ಪ್ರತಿ ವರ್ಷ ಭಾಗೀರಥಿಗೆ ರೇಷ್ಮೆ ಸೀರೆಯನ್ನು ಕೊಡಿಸುತ್ತಿದ್ದರೂ' ಈ ಸಲ ಸುರೇಂದ್ರನಿಗೆ ಜರಿಪಂಚೆ-ಶಾಲು ನೀಡುವುದರೊಂದಿಗೆ ಆಕೆಗೆ ಅರಿಸಿಣ-ಕುಂಕುಮವೆಂದು ಒಂದು ಸಾವಿರ ನಗದು ಹಣ ಕೊಟ್ಟಿದ್ದ. ಸುರೇಂದ್ರ ತಕ್ಕಷ್ಟು ಸ್ಥಿತಿವಂತನಾದರೂ ಮಳೆಯನ್ನು ನಂಬಿ ಬೇಸಾಯ ಮಾಡುವವ. ಇವರ ಹಾಗೆ ಅವನಿಗೆ ತೆಂಗಿನ ತೋಟವೂ ಇರಲಿಲ್ಲ. ಅಲ್ಲದೆ ಹೊಸದಾಗಿ ಮಗು ಬೇರೆ ಆಗಿದ್ದರಿಂದ ಖರ್ಚು ಹೆಚ್ಚಿಗೇನೆ ಇರಬಹುದು- ಅವಶ್ಯಕತೆ ಬಿದ್ದಾಗ ಆದೀತೆಂದು ಅವನ ಅನಿಸಿಕೆ. ಇದರಿಂದ ಭಾಗೀರಥಿಗೆ ತುಂಬ ಖುಷಿಯಾಯಿತು. ಗೋದಾವರಿಗಂತೂ ಯಾವತ್ತಿನ ಹಾಗೆ ಕೃಷ್ಣನ ಬಗ್ಗೆ ಮನಸ್ಸು ತುಂಬಿ ಬಂದಿತಷ್ಟೇ.

# ಅತ್ತಿತ್ತ ಹೊರಳಿದ ಹತ್ತು ಮುಖ

ಕೃಷ್ಣ ಈಗ ಮೊದಲಿನಂತಲ್ಲ : ಒಂದರೆಚಣವೂ ಬಿಡುವಿಲ್ಲದ ವ್ಯಕ್ತಿ ಈಗಾತ. ಈ ಕೆಲವು ವರ್ಷಗಳಲ್ಲಿ ಆತನ ಶ್ರಮ, ಕೆಲಸದಲ್ಲಿನ ನಿಷ್ಠುರ ಶಿಸ್ತು; ಎಲ್ಲರಿಗೂ ನ್ಯಾಯವೆನಿಸುವ ಆತನ ಒಜನದ ಮಾತು ಅವನನ್ನು ಮಲ್ಲಿಗೆಹಳ್ಳಿ, ಸಂಪಿಗೆಹಳ್ಳಿ, ಕೇದಿಗೆವನಹಳ್ಳಿ, ಬಸಾಪುರಗಳಲ್ಲಿ ಮಾತ್ರವಲ್ಲ ಅರಸೀಕೆರೆ ಆ ಕಡೆಯ ಸಕಲೇಶಪುರ, ಈ ಕಡೆಯ ತಿಪಟೂರುಗಳವರೆಗೂ ಅವನು ಪ್ರಸಿದ್ಧ ನಾಗುವಂತೆ ಮಾಡಿದೆ. ಈ ಪ್ರದೇಶಗಳ ತೆಂಗಿನ ಬೆಳೆಗಾರರೆಲ್ಲ ಒಂದಾಗುವಂತೆ ಮಾಡಲು ಕೃಷ್ಣ ಪಟ್ಟ ಪರಿಶ್ರಮವೂ ಕಡಿಮೆಯಾದದ್ದೇನಲ್ಲ. ಸಾರಿಗೆ ಸೌಕರ್ಯ ಇರದ ಹಳ್ಳಿಗಳಿಗೆಲ್ಲ ಎತ್ತಿನ ಗಾಡಿಯಲ್ಲೋ, ಕಡೆಗೆ ಕಾಲುನಡಿಗೆ ಯಲ್ಲೋ ಹೋಗಿ ಅವರಿಗೆಲ್ಲ ವಿಷಯ ಮನವರಿಸಿ ಅವರನ್ನೆಲ್ಲ ಒಂದುಕಡೆ ಬೆರೆಸಲು ತಿಂಗಳುಗಟ್ಟಲೇ ಶ್ರಮವನ್ನವನು ವ್ಯಯಿಸಿದ್ದಿದೆ. ತನ್ನ ತೋಟದ ಹೊಂಬಾಳೆ ಮಾಗಿ ಕಾಯಾಗುವುದನ್ನು ದಿನದಿನವೂ ನೋಡುವುದು ಆತನಿಗಿಷ್ಟ ವಾದರೂ ಈ ದಿನಗಳಲ್ಲಿ ಎದುರಿಗಿದ್ದ ಕಾಯಿಕೀಳುವುದನ್ನು ಎರಡು ಸಲ ತಿರುಗಾಟದ ಕಾರಣದಿಂದಾಗಿಯೇ ಆತನಿಗೆ ಸಾಧ್ಯವಾಗಿರಲಿಲ್ಲ. ಅದರ ಪೂರ್ಣ ಜವಾಬ್ದಾರಿಯನ್ನು ಬೇಸಾಯಗಾರ ಕಾಡಜ್ಜ ಹಾಗೂ ದನಿಯನಿಗೆ ತತ್ಕಾಲೀನ ಬಿಟ್ಟುಕೊಟ್ಟಿದ್ದ—ಕೃಷ್ಣ.

ಮಲ್ಲಿಗೆಹಳ್ಳಿಯನ್ನೂ ಒಳಗೊಂಡಂತೆ ಸಂಪಿಗೆಹಳ್ಳಿಯಲ್ಲಿದ್ದ ಸುತ್ತೂರಿನ ಪಂಚಾಯ್ತಿಗೆ ಕೃಷ್ಣ ಸರಪಂಚನಾಗಿ ಆಯ್ಕೆಯಾದ ರೀತಿಯೂ ಆಶ್ಚರ್ಯಕರ

ದ್ದಾಗಿ ಒಂದುಕಡೆ ಕಂಡರೆ, ಇನ್ನೊಂದೆಡೆ ಅವನ ಜವಾಬ್ದಾರಿಯನ್ನು ಹೆಚ್ಚು ತೀಕ್ಷ್ಣಗೊಳಿಸಿತ್ತು. ಅಲ್ಲಿಯವರೆಗೆ ಹಳ್ಳಿಗಳಲ್ಲಿ ಅಂಥ ದೊಡ್ಡ ಜಗಳ – ಆಸ್ತಿ ಪಾಲು–ಪಡಿಯೆಂದು ಅಷ್ಟಾಗಿ ತಂಟೆ ತಕರಾರು ಇರುತ್ತಿರಲಿಲ್ಲ. ಹೀಗಾಗಿ ಹಿರಿಯರಿಗೆ ಪಂಚಾಯ್ತಿಯ ಅವಶ್ಯಕತೆಯೇನೂ ಕಂಡಿರಲಿಕ್ಕಿಲ್ಲ. ಆದರೂ ಸಾಮಾಜಿಕ ನೀತಿಯನ್ನುವುದೊಂದು ಇರುತ್ತದಲ್ಲ, ನಿಯಮವೆನ್ನುವುದೊಂದಿರುತ್ತದಲ್ಲ, ಅದನ್ನು ಮೀರಿದರೆ ನಾಲ್ಕುಜನ ಅನುಭವಸ್ಥರೆದುರು–ಸಂಸಾರಸ್ಥರೆದುರು ಶಿಕ್ಷೆಯಾಗುತ್ತದೆನ್ನುವ ಅಂಜಿಕೆ ಅಪರಾಧ ಮಾಡುವ ಮೊದಲಿನ ಮನಃಸ್ಥಿತಿಗಿರಲಿ ಎಂದೇನೊ ಐದುಹಳ್ಳಿ ಸೇರಿಸಿ ಪಂಚಾಯ್ತಿಯೊಂದು ಇದ್ದೇ ಇತ್ತು. ಕೃಷ್ಣನ ವಂಶಸ್ತರೂ ಸಹ ಪಂಚರಲ್ಲಿ ಒಬ್ಬರಾಗಿ ಇದ್ದೇ ಇರುತ್ತಿದ್ದರು.

ಈ ಮಧ್ಯೆ ಕೇದಿಗೆಯವನ ಹಳ್ಳಿಯಲ್ಲಿ ಒಂದು ಘಟನೆ ನಡೆಯಿತು. ಆ ಊರಿನ ಕುರುಬರ ಹಟ್ಟಿಯ ಕೆಂಚಣ್ಣ ಎನ್ನುವ ತುಸು ಮುಂಗೋಪದ ಹರೆಯದ ಹುಡುಗನೊಬ್ಬ ಆಸ್ತಿ ಪಾಲುಹಾಕಲು ಅಡ್ಡಿಬರುತ್ತಿದ್ದಾನೆಂಬ ಕಾರಣಕ್ಕೆ ತನ್ನ ಅಣ್ಣನನ್ನು ತನ್ನ ತಂದೆ–ತಾಯಿಯೆದುರೆ ಮಚ್ಚಿನಿಂದ ಕಡಿಯಲು ಹೋದ. ಜನರೆಲ್ಲ ಸೇರಿ ಅದನ್ನು ಹೇಗೋ ತಡೆದರು. ಆ ಹುಡುಗನ ಅಪ್ಪ ಇನ್ನೂ ಮುಂಗೋಪಿ. ಕೆಂಚನನ್ನು ಕಂಬಕ್ಕೆ ಕಟ್ಟಿ ತಾನು ಮಗ ಕೊಲೆ ಮಾಡಲು ತೆಗೆದುಕೊಂಡ ಮಚ್ಚನ್ನೇ ತೆಗೆದುಕೊಂಡು ಮತ್ತಷ್ಟು ಸಾಮು ಹಚ್ಚಿ ತಪ್ಪುಮಾಡಿದ ಕೆಂಚನನ್ನು ತುಂಡುಮಾಡುವುದಾಗಿ ಕೋಪದಲ್ಲಿ ನಿಂತ. ಆ ಮುದುಕನನ್ನು ಸಮಾಧಾನ ಮಾಡಿ, ವಿಷಯ ಪಂಚಾಯ್ತಿಯಲ್ಲಿ ನಿರ್ಧಾರವಾಗಲಿ ಎಂದು ಆತನ ಮನ ಒಲಿಸಬೇಕಾದರೆ ಅಲ್ಲಿದ್ದವರಿಗೆಲ್ಲ ಸಾಕುಸಾಕಾಯಿತು. ಕಡೆಗೆ ವಿಷಯ ಪಂಚಾಯ್ತಿಗೆ ಬಂದು ಎಲ್ಲರಿಗೂ ಹೇಳಿಕಳಿಸಿದರು. ಕೃಷ್ಣನಿಗೆ ಇದು ಹೊಸದು. ಆತನ ತಂದೆ ನರಸಯ್ಯನವರು ತೀರಿಕೊಂಡ ಮೇಲೆ ಹೇಳಿಕೊಳ್ಳುವಂಥ ದೊಡ್ಡ ಜಗಳವೇನೂ ನಡೆದಿರಲಿಲ್ಲವಾದ್ದರಿಂದ ಅವನು ಪಂಚಾಯ್ತಿಗೆ ಈ ಮೊದಲು ಬರುವ ಪ್ರಸಂಗ ಒದಗಿರಲಿಲ್ಲ.

ಪಂಚಾಯ್ತಿಯ ಹಿರೀಕರು – ಹಾಲಕ್ಕಿಗೌಡರಲ್ಲಿ ಹಿರಿಯಗೌಡರು. ಪಂಚಾಯ್ತಿ ನಡೆದದ್ದೂ ಸಂಪಿಗೆಹಳ್ಳಿಯಲ್ಲೇ. ಕೆಂಚಣ್ಣನನ್ನು ಕೇದಿಗೆವನ ಹಳ್ಳಿಯಿಂದ ಆತನ ತಂದೆ ಅವನನ್ನು ಹೆಡೆಮುರಿಗೆ ಕಟ್ಟಿಯೇ ತಂದಿದ್ದ. ಊರಿನ ದೇವಸ್ಥಾನದಲ್ಲಿ ಜನರೆದುರು. ಪಂಚರು, ಅನುಭವಿ ಹಿರಿಯರು

ಸೇರಿದರು. ವಯಸ್ಸಾದವರ ನಡುವೆ ತಾನು ಕುಳಿತುಕೊಳ್ಳಲು ಕೃಷ್ಣ ಹಿಂದೆ ಮುಂದೆ ನೋಡಿದಾಗ ಹಾಲಕ್ಕಿಗೌಡರೇ ಅವನ ಕೈ ಹಿಡಿದು ಕಟ್ಟೆಯಮೇಲೆ ತಮ್ಮ ಪಕ್ಕ ಕುಳ್ಳಿರಿಸಿಕೊಂಡರು. ಆದರೆ ಈ ಸಲದ ಪಂಚಾಯ್ತಿಯಲ್ಲಿ ಒಂದು ವ್ಯತ್ಯಾಸವಿತ್ತು : ನರಸಯ್ಯನವರ ಬದಲು ಅವರ ಮಗ ಇದ್ದದ್ದು ಒಂದಾದರೆ ಇನ್ನೊಂದು ಪಂಚರ ಸ್ಥಾನದಲ್ಲಿರಬೇಕಾದ ಕುರುಬರಹಟ್ಟಿಯ ಮುದುಕ ತನ್ನ ಮಗನ ವಿರುದ್ಧ ದೂರು ತಂದಿದ್ದನಾದ್ದರಿಂದ ಅವನ ಸ್ಥಾನ ಖಾಲಿಯಾಗಿ ಆ ಪಂಚಾಯ್ತಿ ನಡೆಯಬೇಕಿತ್ತು. ಕೃಷ್ಣ ಪಂಚಾಯ್ತಿಗೆ ಬರುವ ಮೊದಲು ಅವನ ತಂದೆ ನರಸಯ್ಯ ಮಾಡುವ ಹಾಗೆ ಗದುಗಿನ ಭಾರತದ ಸರ್ಗಗಳನ್ನು ಓದಿಬಂದಿದ್ದ. ಸೂಕ್ಷ್ಮವಿಚಾರಗಳ ಕುರಿತು ಮಾತನಾಡುವ ಮೊದಲು ಮನಸ್ಸು ಸಂಪೂರ್ಣ ಶುದ್ಧವಾಗಿರಬೇಕು. ಏನನ್ನೂ ಬರೆಯದ ಬಿಳಿಕಾಗದದ ಹಾಗೆ. ಅದರ ಮೇಲೆ ಬರೆದದ್ದೇ ಆದರೆ ಆ ಬರೆದದ್ದು ಯಾರಿಗೂ ನೋವು– ಅನ್ಯಾಯ ಮಾಡುವಂತಿರಬಾರದು, ಅದಕ್ಕೆ ಅದಷ್ಟು ಮನಸ್ಸಿಗೆ ಒಳ್ಳೆಯ ವಿಚಾರ ತುಂಬೋ ಕಾರ್ಯ ಆ ಗಳಿಗೆಯಲ್ಲಿ ಮಾಡಬೇಕು. ಧ್ಯಾನವಾದರೂ ಸರಿ–ಅದಕ್ಕೆ ಸಮಾನವಾದ ಯಾವುದಾದರೂ ಸರಿ, ಎನ್ನುವುದು ನರಸಯ್ಯ ನವರು ಅನುಭವದಿಂದ ಕಂಡುಕೊಂಡ ಮಾತಾಗಿತ್ತು. ಹಾಗೆಂದೆ ಅವರು ಇಂತಹ ಕಾರ್ಯಗಳಿಗೆ ಹೋಗುವಾಗ ಈಶಾವಾಸ್ಯವನ್ನೋ, ಭಾರತವನ್ನೋ ಓದುತ್ತಿದ್ದುದು. ಕೃಷ್ಣನಂತೂ ಅವರ ಕಣ್ಣರಕೆಯಲ್ಲಿ ಬೆಳೆದವನಷ್ಟೇ.

ಕೃಷ್ಣನಿಗೆ ಪಂಚಾಯ್ತಿ ಕಟ್ಟೆ ಏರಿಕೂತು ಜನರ ಗಜಿಬಿಜಿ ಗಮನಿಸುತ್ತಿದ್ದಾಗ ಅವನ ಒಳಮನಸ್ಸು ಹಿಂದೊಮ್ಮೆ ತಾನು ಅಪ್ಪಯ್ಯನೊಂದಿಗೆ ಸಂಪಿಗೆ ಹಳ್ಳಿಗೆ ಬಂದು ಹಾಲಕ್ಕಿಗೌಡರ ಅಸ್ತಿ ಪಾಲು ಮಾಡಿದ್ದು ; ಆ ಬೆಳಗು ಅಪ್ಪಯ್ಯ ತೋರಿಸಿದ– ಸಾಕ್ಷಾತ್ಕಾರ ನೀಡಿದ ಬೆಡಗಿನ ಬೆಳಗು, ಅದೇ ದಿನ ಅಪ್ಪಯ್ಯ ತೀರಿ ಹೋಗಿದ್ದು.... ಇವೆಲ್ಲದರ ಕುರಿತು ಧೇನಿಸುತ್ತಿತ್ತು. ಅವನ ಮನಸ್ಸು ವಿಚಿತ್ರವಾಗಿ ಮೃದುವಾಗಿತ್ತು. ಜನರ ಗದ್ದಲವೆಲ್ಲ ಸ್ತಬ್ಧವಾಗಿ ಹಾಲಕ್ಕಿ ಹಿರಿಯಗೌಡರು ಎದ್ದು ನಿಂತರು. ಕೃಷ್ಣ ಅವರೆಡೆಗೆ ಮುಖವೆತ್ತಿ ನೋಡಿದ. ಹಾಗನ್ನುವುದಾದರೆ ಆ ಪಾಲು ಆದಮೇಲೆ ಕೃಷ್ಣ ನೂರಾರು ಬಾರಿ ಸಂಪಿಗೆ ಹಳ್ಳಿ ಬಂದದ್ದಿದೆ. ಮೂರು ಗೌಡರ ಮನೆಯಲ್ಲೂ ಬೆಲ್ಲ ಹಾಲು ಕುಡಿದದ್ದಿದೆ. ಆ ಪಾಲಾದ ಮೇಲೆ ಗೌಡರು ಮೊದಲಿನಷ್ಟೇ

ಅನ್ಯೋನ್ಯವಾಗಿದ್ದಾರೆ. ಆದರೂ ಇವತ್ಯಾಕೆ ಅದು ನೆನಪಿಗೆ ಬಂತೋ ಕೃಷ್ಣನಿಗೆ ಗೊತ್ತಾಗಲಿಲ್ಲ. ಗೌಡರು ಪಂಚಾಯ್ತಿ ಇನ್ನೇನು ಪ್ರಾರಂಭವಾಗಲಿರುವುದೆಂದು ಹೇಳಿ ಒಂದೆರಡು ನಿಮಿಷ ಸುಮ್ಮನೆ ಕುಳಿತರು. ಕೃಷ್ಣ ಕೆಂಚನ ಕಡೆ ನೋಡಿದ. ಅವನು ಅಸಹಾಯಕತೆಯಲ್ಲಿ ತಲೆ ತಗ್ಗಿಸಿ ನಿಂತಿದ್ದ. ಅವನ ಮೈಗೆ ಕಟ್ಟುಗಳು ಬಿಗಿದಿದ್ದವು. ಕೃಷ್ಣನಿಗೆ ಅವನನ್ನು ಎಲ್ಲರೆದುರು ಹಾಗೆ ನಿಲ್ಲಿಸುವುದು ಸರಿಯೆನಿಸಲಿಲ್ಲ. ಅದೇ ಮಾತನ್ನು ಗೌಡರಿಗೆ ಮೆಲ್ಲಗೆ ಹೇಳಿದ. ಗೌಡರು ಅದನ್ನು ಗಮನಿಸಿರಲಿಲ್ಲವೇನೋ– ಕೃಷ್ಣನ ಮಾತು ನಿಜವೆನಿಸಿತು ಹಾಗೆಂದು–ಮೊದಲು ತಪ್ಪಿತಸ್ಥನ ಕಟ್ಟು ಬಿಚ್ಚೋಣವಾಗಲಿ, ಆಮೇಲೆ ವಿಚಾರಣೆ ನಡೆಯುತ್ತದೆಂದರು. ಕುರುಬರ ಹಿರಿಯ ಮಗನ ಕೋಪ ತಿಳಿದಿದ್ದವನು ಮೊದಲು ಹಗ್ಗ ಬಿಚ್ಚಲು ಹಿಂಜರಿದು ಕಡೆಗೆ ಪಂಚರ ಮಾತು ಎಂದು ತಾವೇ ಹೋಗಿ ಕಟ್ಟು ಸಡಿಲಿಸಿದರು. ಜನ ಕುತೂಹಲದಿಂದ ಗಮನಿಸುತ್ತ ನಿಂತು–ಕೂತು ಇದ್ದರು. ಫಿರ್ಯಾದು ಹೇಳುವಂತೆ ಕೇಳಲಾಯಿತು. ಕುರುಬರ ಹಿರಿಯ ಮಗನ ವಾದ–ಅವನು ಮಾಡಿದ ಕಾರ್ಯ ಹೇಳಿ ಅವನ ತಪ್ಪಿಗೆ ಪಂಚಾಯ್ತಿಯಲ್ಲಿ ಎಲ್ಲರ ಸಮಕ್ಷಮದೆದುರು ಬಾರುಕೋಲಿನಿಂದ ಬಾರಿಸಬೇಕು ಎಂದು ಹೇಳಿದ. ಜನರಲ್ಲೆಲ್ಲ ಮತ್ತೆ ಗುಸುಗುಸು ಶುರುವಾಯಿತು. 'ಹೌದು ಹಿರೀಕ ಹೇಳಿದ್ದು ಸರಿ' ಎಂದು ಕೆಲವರೆಂದರೆ ಇನ್ನೂ ಕೆಲವರು 'ಅದೆಂಗಾದ್ದು' ಎಂದರು. ಪಂಚರು ತಮ್ಮ ತಮ್ಮಲ್ಲೇ ಮಾತಾಡಿಕೊಂಡರು. ವಿಷಯ ಅಂತಹ ಕಷ್ಟದ್ದೇನೂ ಆಗಿರಲಿಲ್ಲ–ಆದರೆ ಸೂಕ್ಷ್ಮವಾಗಿತ್ತು. ಪಾಲು ಮಾಡುವುದಿಲ್ಲವೆಂದರೆ ಮೊದಲೇ ಮುಂಗೋಪದ ಹುಡುಗ ಮುಂದೆ ಮತ್ತೇನಾದರೂ ಮಾಡುವ ಸಾಧ್ಯತೆಯಿತ್ತು. ಹಾಗೆಂದು ಪಾಲು ಕೇಳುವುದು ಅತಿ ಸಾಮಾನ್ಯವಾದ ಈ ಕಾಲದಲ್ಲಿ ಅವನದು ತಪ್ಪೆಂದು ಅವನಿಗೆ ಶಿಕ್ಷೆ ಕೊಡುವಂತೆಯೂ ಇರಲಿಲ್ಲ. ಇದರೊಂದಿಗೆ ಮೊಂಡು ಹಠದ ಕುರುಬರ ಮುದುಕ ಅದೇನೆ ಆದರೂ ಪಾಲು ಮಾಡುವುದಿಲ್ಲವೆಂದು ಪಟ್ಟು ಹಿಡಿದಿದ್ದ. ವಿಷಯವನ್ನು ಮತ್ತಷ್ಟು ಕ್ಲಿಷ್ಟಗೊಳಿಸಿ ಪಂಚರನ್ನು ಮುಜುಗರಕ್ಕೆ ತಳ್ಳಿದ್ದ. ಈಗ ಪಕ್ಷಪಾತವಿಲ್ಲದೆ ನ್ಯಾಯ ಬಗೆಹರಿಯಬೇಕಿತ್ತು. ಎಲ್ಲರೂ ಯೋಚಿಸಿ ಮೂರು ನಾಲ್ಕು ಪರ್ಯಾಯ ಹುಡುಕಿದರೂ ಅವು ಅಷ್ಟೇನೂ ಸಮಂಜಸವಾಗಲಿಲ್ಲ. ಕೆಂಚ ಮತ್ತೆ ಜಗಳ ತೆಗೆಯುದೇ ಅವರ ಅಪ್ಪನ ಮನೆಯಲ್ಲಿಯೇ ಇರುವಂತೆ,

ಪಾಲು ಕೇಳದಂತೆ ನ್ಯಾಯ ಹೇಳಬೇಕಿತ್ತು. ಈಗಾಗಲೇ ಫಿರ್ಯಾದು ನೀಡಿ ಬಹಳ ಹೊತ್ತಾಗಿದ್ದರಿಂದ ಕೂತ ಜನರಲ್ಲಿ ಚಡಪಡಿಕೆ, ಗುಜುಗುಜು ಹೆಚ್ಚಾಗಿತ್ತು. ಅವರಿಗೆಲ್ಲ ಪ್ರತಿ ಸಣ್ಣ ಪಂಚಾಯ್ತಿ ಹೇಗೆ ಕೊನೆಗೊಳ್ಳುತ್ತದೆಂದು ಕುತೂಹಲ. ಮುಗಿದ ಮೇಲೆ ಕೆಲಸವಿಲ್ಲದ ಕೆಲವರು ಕಟ್ಟೆಗಳ ಮೇಲೆ ಕುಳಿತು ದಿನಗಟ್ಟಲೇ ತೀರ್ಪಿನ ಕುರಿತು ಸರಿ, ತಪ್ಪು ಮಂಡಿಸುತ್ತ ಪಂಟು ಹೊಡೆಯಲು ಕಾತುರರಾಗಿದ್ದರು.

ಕೃಷ್ಣ ಒಂದರೆಗಳಿಗೆ ಕಣ್ಮುಚ್ಚಿ ಯೋಚಿಸಿದ : ಇದೇ ಕೆಲಸವನ್ನು ನಾನು ಅಪ್ಪಯ್ಯನಿಗೆ ಮಾಡಿದ್ದರೆ ಅವರೇನು ಮಾಡುತ್ತಿದ್ದರು ? ಮೊದಲು ದೊಡ್ಡದಾಗಿ ನಕ್ಕು ಬಿಡುತ್ತಿದ್ದರೇನೋ ! ಆಮೇಲೆ ಅನ್ನುತ್ತಿದ್ದರು : 'ಅದಕ್ಕೇನು ಮಾರಾಯ ? ತಗೋ. ಆದರೆ ಪಾಲ್ಯಾಕೆ ಮಾಡಬೇಕು ? ಏನು ? ಮಣ್ಣಲ್ಲೇನಿದೆ ಮಣ್ಣು ! ಅದನ್ನ ಹದ ಮಾಡಿ ಬೆಳೆದರಷ್ಟೇ ಅದಕ್ಕೆ ಬೆಲೆ ? ನೀನೇ ನಿಂತು ಬೆಳೆಸು. ಯಾರು ಬೇಡಾಂದವರು. ಬೇಕಂದರೆ ಎಲ್ಲ ನೀನೇ ತಗೋ. ನನಗೆ ಒಂದು ಕಾಳೂ ಬೇಡ, ನೀನು ದುಡಿದದ್ದರಲ್ಲಿ....' ಕೃಷ್ಣ ಮತ್ತೊಂದು ಗಳಿಗೆ ಯೋಚಿಸಿ, ನಿಧಾನಕ್ಕೆ ಗೌಡರ ಬಳಿ ಸರಿದು ಅವರ ಕಿವಿಯಲ್ಲಿ ತನಗನಿಸಿದ್ದು ಹೇಳಿದ. ಗೌಡರು ಕಣ್ಮುಚ್ಚಿ ಯೋಚಿಸಿದರು. ಅವರು ಕಣ್ತೆರೆದಾಗ ತೃಪ್ತಿಯಲ್ಲಿ ನಗುತ್ತಿದ್ದರು–ಸಮಸ್ಯೆಗೆ ಸುಲಭೋಪಾಯ ! ಸರಿ, ಎದ್ದು ನಿಂತು ಶಾನುಭೋಗರು ನ್ಯಾಯ ಹೇಳುತ್ತಾರೆಂದು ಹೇಳಿ ಕೂತುಬಿಟ್ಟರು. ಕೃಷ್ಣನಿಗೋ ಜನರ ವಹಿವಾಟು ಇದ್ದರೂ, ನಾಲ್ಕಾರು ಜನರೊಂದಿಗೆ ಬಳಕೆಯಿದ್ದರೂ ಗುಂಪನ್ನು ಉದ್ದೇಶಿಸಿ ಎಂದೂ ಮಾತಾಡಿದವನಲ್ಲ : ತನ್ನ ಈ ಮೂವತ್ತೈದು ವರುಷಗಳಲ್ಲಿ ! ಅವನ ಆಧ್ಯಾತ್ಮಿಕ, ತೂಕದ ಮಾತುಗಳೆಲ್ಲ ಅತಿ ಸಹಜವಾಗಿ ಹರಟೆ ಹೊಡೆಯುವಾಗಲೋ ಇಲ್ಲ ಅಮ್ಮಳೊಂದಿಗೆ ಅಡುಗೆ ಮನೆಯಲ್ಲಿ ಪಂಟು ಮಾಡುವಾಗಲೋ ಬರುವಂಥವು ! ಆದರೆ ಇಂತಹ ಜನ ನೆರೆದ ಸಂದರ್ಭದಲ್ಲಿ ಯೋಚಿಸುತ್ತ ಕೂರುವ ಹಾಗಿರಲಿಲ್ಲ. ಜತೆಗೆ ಹಾಲಕ್ಕಿಗೌಡರು ಮತ್ತೊಮ್ಮೆ ಅವನ ಮಗ್ಗಲು ತಿವಿದರು. ಈಗ ಕೃಷ್ಣ ಅನಿವಾರ್ಯವಾಗಿ ಎದ್ದು ನಿಂತು ತೀರ್ಪನ್ನು ಹೇಳುವ ಪ್ರಸಂಗ ಬಂತು.

ಕೃಷ್ಣ ಪಾಣಿಪಂಚೆ ಸರಿಪಡಿಸಿಕೊಳ್ಳುತ್ತ ನಿಧಾನಕ್ಕೆ ಎದ್ದು ನಿಂತ. ಕುಳಿತ ಪಂಚರಿಗೆ, ನೆರೆದಿದ್ದ ಜನರಿಗೆ ನಮಸ್ಕಾರ ಮಾಡಿದ. ಒಂದು ನಿಮಿಷದ ಮೌನದ ನಂತರ ಮಾತಾಡ ತೊಡಗಿದ : 'ನನಗನ್ನಿಸುವ ಹಾಗೆ ಕೆಂಚ ಪಾಲು ಬೇಡಿದ್ದರಲ್ಲಿ ತಪ್ಪೇನೂ ಇಲ್ಲ. ಅದು ಅವನ ಹಕ್ಕು....' ಈ ವಾಕ್ಯ ಮುಗಿಸುವುದರೊಳಗೆ ಜನರ ಗುಂಪಲ್ಲಿ ಗಜಿ ಬಿಜಿ, ಗದ್ದಲ ತೀರಾ ಹೆಚ್ಚಾಯಿತು. ಕುರುಬರ ಮುದುಕ ಸಿಟ್ಟಿನಿಂದ ಕೃಷ್ಣರೆಡೆಗೆ ನೋಡ ತೊಡಗಿದ. ಜನರ ಗೌಜನ್ನು ಕಡಿಮೆ ಮಾಡಲು ಗೌಡರು 'ಸದ್ದು ಸದ್ದು' ಎಂದು ಕೂಗಿದರು. ತಳವಾರ ಕೋಲನ್ನು ನೆಲಕ್ಕೆ ಕುಟ್ಟಿದ. ಮತ್ತೊಂದೆರಡು ನಿಮಿಷಕ್ಕೆ ಸದ್ದು ಕ್ರಮೇಣ ಕಡಿಮೆಯಾದ ಮೇಲೆ ಹಾಲಕ್ಕಿಗೌಡರು ಕೃಷ್ಣನತ್ತ ತಿರುಗಿ ಮುಂದುವರೆಸುವಂತೆ ಸನ್ನೆ ಮಾಡಿದರು. ಕೃಷ್ಣ ಮುಂದುವರಿಸಿದ : 'ಹೌದು, ಕೆಂಚ ತನ್ನ ಪೂರ್ವಿಕರಿಂದ ಬಂದ ಚರಾಸ್ತಿಯಲ್ಲಿ ಪಾಲು ಕೇಳಿದ್ದರಲ್ಲಿ ಏನೂ ತಪ್ಪಿಲ್ಲ. ಆದರೆ ಇದು ಪಾಲು ಕೇಳುವ ಸಮಯವೇ, ಹಾಗೆ ಪಾಲು ಮಾಡಿದ ಮೇಲೆ ಅದನ್ನು ಉಳಿಸಿ-ಬೆಳೆಸುವ ಶಕ್ತಿ ಕೆಂಚನಿಗಿದೆಯೋ ಅನ್ನೋದು ಮುಖ್ಯ. ಅಲ್ದೇ ಕೆಂಚನ ತಂದೆಯ ಆಸ್ತಿಯಲ್ಲವೂ ಕೆಂಚನದ್ದೇ ಆದ್ದರಿಂದ ಅದನ್ನು ಪಾಲು ಮಾಡಲೇ ಬೇಕಿಲ್ಲ. ಹಾಗೆ ಪಾಲು ಕೇಳಿ ತಂದೆಯ ಮನಸ್ಸಿಗೆ ನೋವು ಮಾಡಿದ ಕೆಂಚನಿಗೆ ಪಂಚರ ಸಲಹೆ ಒಂದಿದೆ. ಆತ ಇನ್ನು ಹತ್ತು ವರ್ಷಗಳವರೆಗೆ ತಾನೇ ಭೂಮಿಯ ಜವಾಬ್ದಾರಿ ವಹಿಸಿ, ಒಕ್ಕಲುತನ ಮಾಡಿ ಒಳ್ಳೆಯ ಫಸಲು ತೆಗೆದು ತೋರಿಸಬೇಕು. ಮಗನ ಮೇಲೆ ನಂಬಿಕೆ ಬಂದ ಮೇಲೆ ಹಿರಿಯರೇ ನಿಂತು ಕೆಂಚನ ಹೆಸರಲ್ಲಿ ಅವನ ಜಮೀನಿನ ಪಾಣಿ ಮಾಡಿಸಬೇಕು. ಈ ಹತ್ತು ವರ್ಷಗಳಲ್ಲಿ ಕೆಂಚ ಬೆಳೆಸಿದ ಹೆಚ್ಚುವರಿ ಫಸಲಿನ ಮಾರಾಟದ ಹಣವೂ ಆ ಸಂದರ್ಭದಲ್ಲೇ ಅವನಿಗೆ ಕೊಡುವಂತೆ ಮಾಡುತ್ತದೆ. ಮುಖ್ಯ ವಿಚಾರ ಭೂಮಿ ಬೆಳೆಸುವಲ್ಲಿ ತಂದೆಯಷ್ಟೇ ಕೆಂಚನೂ ನಿಗಾ ವಹಿಸುವುದು. ಇಷ್ಟು ಸರಪಂಚರಿಗೆ ಅನಿಸಿದ್ದು. ಇದು ಎಲ್ಲರಿಗೂ ಒಪ್ಪಿಗೆಯೆ....?' ಎನ್ನುತ್ತ ಕೃಷ್ಣ ನಿಂತ ಜಾಗದಲ್ಲೇ ಕುಳಿತುಕೊಂಡ. ಸಭೆ ಒಂದರೆಕ್ಷಣ ತೀರ್ಪಿಗೆ ದಂಗಾಗಿ ಏನೂ ತಿಳಿಯದೆ ಕಕ್ಕಾವಿಕ್ಕಿಯಾಯಿತು. ನಿಧಾನಕ್ಕೆ ಹರ್ಷದ ಮಾತುಗಳು ಕೇಳ ಬರತೊಡಗಿದವು. ಹಾಲಕ್ಕಿಗೌಡರು ಹರ್ಷಾತಿರೇಕದಲ್ಲಿ ಕೃಷ್ಣನನ್ನು ಕಟ್ಟೆಯ ಮೇಲೇ

ತಬ್ಬಿಕೊಂಡರು. ಕುರುಬರ ಹಿರಿಯ—ಈಗ ಅಪರಾಧಿ ಭಾವನೆಯಲ್ಲಿ ನಿಂತಿದ್ದ; ತನ್ನ ತಪ್ಪಿನ ಅರಿವಾದವನಂತೆ ಕಾಣುತ್ತಿದ್ದ ಕೆಂಚಪ್ಪ ಇಬ್ಬರೂ ತೀರ್ಪಿಗೆ ಒಪ್ಪಿ ತಲೆದೂಗಿದರು. ಜನರ ಗುಂಪಿನಿಂದಲೂ 'ಒಪ್ಪಿಗೆ' ಎಂಬ ಕೂಗುಗಳು ಬಂದವು. ಸ್ವಲ್ಪವೂ ಜಗಳ-ರೆಂಟೆಗಳಿಲ್ಲದೆ ಬಗೆಹರಿದ ಅಂದಿನ ಪಂಚಾಯ್ತಿ ಎಲ್ಲರಿಗೂ ಸಮಾಧಾನ ತಂದಿತ್ತು. ಕೃಷ್ಣನ ಕುರಿತೇ ಮಾತಾಡುವಂತೆ ಮಾಡಿತ್ತು.

ಪಂಚಾಯ್ತಿ ಮುಗಿದ ಮೇಲೆ ಪಾಲಕ್ಕಿಗೌಡತಿಯರ ಕುಶಲ ವಿಚಾರಿಸಲು ಹೋದಾಗ ಅವರೆದುರು ಗೌಡರು ಕೃಷ್ಣನನ್ನು ಹಾಡಿ ಹೊಗಳಿದರು. ಹಾಲು-ಬೆಲ್ಲದವಲಕ್ಕಿ ತಿಂದು, ಮಕ್ಕಳನ್ನು ನೋಡಬೇಕು ಎಂದು ಅವಸರದಲ್ಲಿ ಹೊರಡುವ ಮೊದಲು ಹಿರಿಯಗೌಡರು ಕೃಷ್ಣನನ್ನು ತಬ್ಬಿಕೊಳ್ಳುತ್ತ ಹೇಳಿದರು : 'ಕೃಷ್ಣಸ್ವಾಮಿ, ನೀನು ವಯಸ್ಸಲ್ಲಿ ಸಂಗಿಂತ ಚಿಕ್ಕೋನು, ಪರವಿಲ್ಲ. ನಿನಗ ಕೈಮುಗಿಬೇಕು ಅನಸ್ತದೆ. ನನ್ನಂಥ ವಯಸ್ಸಾದೋನಿಗೆ ಹ್ವಳಿದ ವಿಚಾರ ನಿಂಗೆಂಗೋ ಮಗಾ ತಿಳಿದ್ದು ? ಇನ್ನು ಮುಂದೆ ಪಂಚಾತಿ ಆದ್ರ ಸರಪಂಚನಾಗಿ ನಾನಿರಕ್ಕಿಲ್ಲ, ಆ ಜಾಗದಾಗ ನೀನ ಕುಂದ್ರು....' ಕೃಷ್ಣನಿಗೆ ಏನೂ ಹೇಳಲೂ ತೋಚದೆ ಮೌನ ಅಂಗೀಕಾರ ನೀಡಿ ಹಳ್ಳಿಗೆ ನಡೆದಿದ್ದ.

ಕೃಷ್ಣನ ಪಂಚಾಯ್ತಿ ತೀರ್ಪಿನ ವಿಚಾರ ಸುತ್ತೂ ಹಳ್ಳಿಗಳಲ್ಲಿ ಮಾತಾಡಿಕೊಳ್ಳುವ ವಿಷಯುವಾಯ್ತು. ಇಂತಹ ಸಣ್ಣ ವಿಷಯವನ್ನು ಅದೇಕೆ ಜನ ದೊಡ್ಡದು ಮಾಡಿ, ತನ್ನನ್ನು ದೊಡ್ಡವನನ್ನಾಗಿ ಮಾಡುತ್ತಿದ್ದಾರೋ ತಿಳಿಯದೆ ಕೃಷ್ಣ ಸುಮ್ಮನಾಗಿಬಿಟ್ಟ. ಆದರೆ ಪಂಚಾಯ್ತಿ ತೀರ್ಪು ಅವನಿಗೆ ಸಂಜೆ ಕಳೆದು ಬೆಳಗಾಗುವಲ್ಲಿಗೆ 'ಕೃಷ್ಣಸ್ವಾಮಿ' ಎಂದು ಹೆಸರು ತಂದು ಕೊಡುವುದರೊಂದಿಗೆ ಒಂದು ಸಹಾಯವನ್ನು ಮಾಡಿತ್ತು. ತನ್ನ ಸುತ್ತು ಊರುಗಳ ತೆಂಗು-ಕಂಗು ಬೆಳೆಗಾರರನ್ನು ಒಗ್ಗೂಡಿಸಲು ಹಳ್ಳಿ ಸುತ್ತುತ್ತಿದ್ದ. ಅವನಿಗೆ ಜನ ಸುಲಭದಲ್ಲಿ ಗುರುತುಹಿಡಿದರು. ಬೆಳೆಗಾರರಿಗೆ ಮಾರುಕಟ್ಟೆಯಲ್ಲಿ ಒಂದೇ ಬೆಲೆ ದೊರಕಬೇಕೆಂದು, ಅದಕ್ಕೆ ನಾವೆಲ್ಲ ಒಂದೆಡೆ ಇದ್ದರೆ ಅನುಕೂಲವೆಂದು ಅವನು ಹೇಳಿದಾಗ ಯಾರೂ ಎದುರಾಡದೆ ಅವನ ಮಾತನ್ನು ಒಪ್ಪಿಕೊಂಡು ಅವನ ಕೆಲಸವನ್ನು ಮತ್ತಷ್ಟು ಸರಾಗ ಮಾಡಿದ್ದರು. ಅವರಾದರೂ ತಮ್ಮ ಕಷ್ಟ-ನಷ್ಟ ಹೇಳಿಕೊಳ್ಳಲು, ಅದನ್ನು ಬಗೆಹರಿಸುವುದು

ಹೇಗೆಂದು ತಿಳಿದುಕೊಳ್ಳಲು ತಮ್ಮವನೆನ್ನುವ ಜನ ಬೇಕಿತ್ತಷ್ಟೇ. ಇಲ್ಲಿಯ ವರೆಗೂ ಇಲ್ಲದಿದ್ದ, ಈಗ ತಾನೇ ಬಂದು ಪರಿಹಾರ ಸೂಚಿಸುವ ವ್ಯಕ್ತಿಯನ್ನು ಕಂಡರೆ ಯಾರು ತಾನೇ ಬೇಡವೆಂದಾರು ? ಅನೇಕ ಬಾರಿ ಹಾಗಾಗುತ್ತದೆ : ಜನ ತಮ್ಮ ಮನಸ್ಸಿನಲ್ಲಿರುವುದನ್ನು, ತಮ್ಮ ನೋವನ್ನು ತೀರ ಹತ್ತಿರದವ ರಿಗೂ ಹೇಳಿಕೊಳ್ಳಲು ಆಗದೆ ಒದ್ದಾಡುತ್ತಾರೆ. ಆದರೆ ದಿಢೀರನೆ ಸಿಕ್ಕು ಅಪರಿಚಿತ, ಅನಾಮಧೇಯ ಎಲ್ಲರಿಗಿಂತ ಹತ್ತಿರದವನು ಅನಿಸಿ ಎಲ್ಲ ಹೇಳಿ ಕೊಂಡು, ತಮ್ಮ ಭಾರ ಅವನಿಗಷ್ಟು ಕೊಟ್ಟು ಹಗುರಾಗಿಬಿಡುತ್ತಾರೆ. ಈಗಂತೂ ಕೃಷ್ಣ ತಾನಾಗಿಯೇ ಆಸಕ್ತಿ ವಹಿಸಿ ಜನರ ಬಳಿ ಹೋಗಿದ್ದ, ಕೇಳಬೇಕೇ !

ಂ ಂ ಂ

ಮುಂದಿನ ಐದು ವರ್ಷಗಳಲ್ಲಿ ಕೃಷ್ಣನ ಬೆವರಿಗೆ ಐನೂರು ತೆಂಗುಸಸಿ ಹೆಮ್ಮರವಾಗಿ ಬೆಳೆದು ನಳನಳಿಸಿದವು. ಸಂಸಾರದ ಹುಳಿ, ಮಧುರತೆ, ಕಹಿ-ಜೇನು, ಹಲವೊಮ್ಮೆ ಬೇಸರ – ಗೋದಾವರಿಬಾಯಿ ಮಗ ನಾಣಿಯ ದಾರಿ ಕಾಯುತ್ತ ಮಂಜುಗಣ್ಣಿಗೆ ತುಂಬುವ ಭರವಸೆ.... ಹೀಗೆ ಬದುಕು – ಪದಕುಸಿದರೂ ನೆಲವಿಹುದೆಂಬ ತತ್ವದ ಮೇಲೆ ನಡೆದಿತ್ತು.

ಈ ದಿನಗಳಲ್ಲಿ ಕೃಷ್ಣ ತಪ್ಪದಂತೆ ಡೈರಿ ಬರೆಯುವ ಹವ್ಯಾಸ ಬೆಳೆಸಿ ಕೊಂಡಿದ್ದ. ಜತೆಗೆ ಅರಸೀಕೆರೆ, ಹಾಸನ, ಮೈಸೂರಿಗೆ ಹೋದಾಗಲೆಲ್ಲ ಹೊಸ ಹೊಸ ಪುಸ್ತಕಗಳನ್ನು ತಂದು ಕಪಾಟಿನಲ್ಲಿ ಮಟ್ಟಸವಾಗಿ ಜೋಡಿಸಿಟ್ಟಿದ್ದ. ಪ್ರತಿ ಮಧ್ಯಾಹ್ನ ; ರಾತ್ರಿ ಮಲಗುವ ಮೊದಲು ನಿದ್ದೆ ಬರುವವರೆಗೂ ಓದು ವುದು ; ಅದರಲ್ಲಿ ಮನಸ್ಸಿಗೆ ಹಿಡಿಸಿರುವುದನ್ನು ಪೆನ್ಸಿನ ಮೂಲಕ ಗೆರೆ ಎಳೆದು ಮತ್ತೊಮ್ಮೆ ಕಣ್ಣುಹಾಯಿಸುವುದು, ಆಮೇಲೆ ಡೈರಿಯಲ್ಲಿ ಬರೆಯುವುದು. ಸಂಜೆ ಮನೆಯವರೆಲ್ಲ ಕಾಲುತೊಳೆದು ಕೂತರೆ ಅವರಿಗೆ ಕುಮಾರವ್ಯಾಸನ ಗದುಗಿನ ಭಾರತವನ್ನು ಲಯಬದ್ಧವಾಗಿ ಹಾಡಿ ತೋರಿಸುವುದು. ಹಾಗೊಮ್ಮೆ ಅಪ್ಪಯ್ಯ–ನಾರಣಪ್ಪನೂ ನಮ್ಮ ವಂಶಸ್ಥನೇನೋ ಕೃಷ್ಣ, ಅಟ್ಟದ ಮೇಲೆ ಪೇರಿಸಿಟ್ಟಿರುವ ಗಂಟುಗಳಲ್ಲಿ ವಿವರಗಳಿವೆ ಒಮ್ಮೆ ತೆಗೆದು ತೋರಿಸುವೆ –

ಎಂದು ಅವನ ತಂದೆ ಹೇಳಿದಮಾತು ಭಾರತ ಓದುವಾಗಲೆಲ್ಲ ನೆನಪಿಗೆ ಬರುವು ದಾದರೂ ಒಮ್ಮೆಯೂ ಅಟ್ಟ ಹತ್ತಿ ಗಂಟುಬಿಚ್ಚಿ ಪರಿಶೀಲಿಸಬೇಕೆಂದು ಅನ್ನಿಸ ಲಿಲ್ಲ ಕೃಷ್ಣನಿಗೆ. ಆದರೂ ತನ್ನ ಮಕ್ಕಳಾದ ಶಾರದೆ, ನರಸಿಂಹ, ಶ್ರೀನಿವಾಸ ರಿಗೆ – ನೀವು ನಾರಣಪ್ಪನ ವಂಶಸ್ಥರು.... ಎಂದಾತ ಹೇಳುವುದುಂಟು....

ತೋಟದಲ್ಲಿ ಬೆಳೆದ ಫಲ ಮಾರಲು ಊರೂರು ಸುತ್ತಿದರೂ ಒಂದು ದಿನ ಕ್ಕಿಂತಲೂ ಎಲ್ಲಿಯೂ ಹೆಚ್ಚಿಗೆ ನಿಂತವನಲ್ಲ ಕೃಷ್ಣ. ಆದರೂ ಹೋದಲ್ಲೆಲ್ಲ ಅವನ ಚೀಲದಲ್ಲಿ ತಾನು ಓದುವ ಪುಸ್ತಕ ; ಡೈರಿ ಮಾತ್ರ ತಪ್ಪದೇ ಇರುತ್ತಿ ದ್ದವು. ತನ್ನ ಡೈರಿಯ ಮುಖಪುಟದ ಮೇಲೆ ಎಂ. ಎನ್. ಕೃಷ್ಣಸ್ವಾಮಿ ಎಂದು ಬರೆದಾದಮೇಲೆ ಬರೆದ 'ಕೊಕನಟ್ ಪ್ಲಾಂಟರ್' ಎಂಬಲ್ಲಿ, ಆಮೇಲೆ ಬರೆದ 'ಮಲ್ಲಿಗೆಹಳ್ಳಿ ಹ್ಯಾಮ್ಲೆಟ್' ಎಂಬಲ್ಲಿ ಕೈಸವರಿದರೆ ಅವನಿಗೆಂಥದೋ ಖುಷಿ! ಹಾಗೊಮ್ಮೆ ಅರಸೀಕೆರೆಗೆ ಹೋದಾಗ ಅಲ್ಲಿಂದ ತನ್ನ ಹೆಸರು, ಊರು, ಹ್ಯಾಮ್ಲೆಟ್‌ಗಳ ಹೆಸರಿರುವ ರಬ್ಬರ್‌ಸ್ಟ್ಯಾಂಪು ಸಹ ಅವನ ಚೀಲದಲ್ಲಿ ಅವನ ಜತೆಗೇ ಇರುತ್ತಿದ್ದವು. ಬಿಡುವಿರುವಾಗ ಕಪಾಟಿನಲ್ಲಿ ಜೋಡಿಸಿದ ಪುಸ್ತಕಗಳಿಗೆ 'ರೊಟ್ಟು' ಹಾಕುವುದು ; ರೊಟ್ಟಿನಮೇಲೆ ಆ ಸೀಲನ್ನು ಒತ್ತುವುದು. ಅವನಿಗೆ ಯಾವಾಗ, ಯಾರು ಇಂಗ್ಲೀಷು ಕಲಿಸಿದ್ದರೊ ಅಥವ ಹುಟ್ಟು ವಾಗಲೇ ಕರಗತ ಪ್ರತಿಭೆ ಜತೆಗೆ ತಂದಿದ್ದನೋ – ತನ್ನ ಕಾಲದಲ್ಲಿ ಪ್ರಖ್ಯಾತ ರಿದ್ದವರೆಲ್ಲರ ಇಂಗ್ಲೀಷ್ ಕಾದಂಬರಿ – ಕಾವ್ಯಗಳನ್ನವನು ಓದಿದ್ದ ! ಇದೆಲ್ಲ ಹಲವರಿಗೆ ಚಕಿತರನ್ನಾಗಿಸುವುದು. ಅವುಗಳ ಕುರಿತು ಮಾತನಾಡುವುದು ಮತ್ತೂ ಸೋಜಿಗ ತರುವುದು.

ಪ್ರಿಯ ಓದುಗ,

ನಲವತ್ತೈದನ್ನು ಸಮೀಪಿಸುತ್ತಿರುವ, ಹಾಗೆಯೇ ವರ್ಷದ ಹಿಂದೆ ಯಷ್ಟೇ ಮೂರನೆ ಮಗುವಿನ ತಂದೆಯಾದ ಕೃಷ್ಣನನ್ನು ಇದೀಗ ಎಲ್ಲರೂ ಕೃಷ್ಣಸ್ವಾಮಿಗಳು ಎಂದೇ ಸಂಬೋಧಿಸುತ್ತಾರೆ. ಅವರ ಮನೆಯ ಜಗುಲಿ ಯಲ್ಲಿ ಜಗತ್ತಿನ ಸರ್ವವಿಷಯ ಸಂಗ್ರಹಗಳೂ ಇರುವುದರಿಂದ ಸ್ವಾಮಿಗಳ ಮಾತೆಂದರೆ ಎಲ್ಲರೂ ತುದಿಗಾಲಮೇಲೆ ನಿಲ್ಲುತ್ತಾರೆ. ಅಲ್ಲದೆ ಸುತ್ತಮುತ್ತ ಅವರ ಮಾತಿನ ವಜನೂ ಹೆಚ್ಚಿರುವುದರಿಂದ ಈ ಲೇಖಕನೂ ಸಹ ಇನ್ನು ಮುಂದೆ ಕೃಷ್ಣಸ್ವಾಮಿ ಎಂದೇ ಕರೆಯುತ್ತಾನೆ.

'ರಸಭಂಗಕ್ಕಾಗಿ ಕ್ಷಮಿಸಿ....

ಮೊದಲು ಕೈಯಲ್ಲಿ ಎಣಿಸಬಹುದಾದಷ್ಟು ಮನೆಗಳಿದ್ದ ಮಲ್ಲಿಗೆಹಳ್ಳಿ ಈಗೀಗ ಸ್ವಲ್ಪ ದೊಡ್ಡದಾಗಿದೆ. ಈ ಹಳ್ಳಿಯ ಮೂಲದವರಲ್ಲದೆ ಅಲ್ಲಿಲ್ಲಿನ ಜನ ಬಂದು ನೆಲೆಸಿದ್ದಾರೆ. ಇಲ್ಲಿಂದ ಎರಡಾಳು ಕೂಗಳತೆಯಲ್ಲಿದ್ದ ಬಸಾಪುರವೂ ಮಲ್ಲಿಗೆ ಹಳ್ಳಿಗೆ ಹತ್ತು ಹೆಜ್ಜೆಯಷ್ಟು ಹತ್ತಿರವಾಗಿದೆ. ಕಾಡಿದ್ದ ದಾರಿಯೆಲ್ಲೆಲ್ಲ ಒಂದಿಷ್ಟು ಮನೆಗಳಾಗಿವೆ. ಈ ಮೊದಲು ಬ್ರಿಟೀಷರ ಆಮೇಲೆ ಸಂಸ್ಥಾನದ ಸುಪರ್ದಿಯಲ್ಲಿದ್ದ ಜಮೀನೆಲ್ಲ ಕಂದಾಯ ಇಲಾಖೆಗೆ ಸೇರಿ, ಹಲವರು ಆ ನೆಲವನ್ನು ಇಲಾಖೆಯಿಂದ ಕೊಂಡು ತಾವು ಸಹ ಕೃಷ್ಣಸ್ವಾಮಿಗಳಂತೆ ಮಾವು-ತೆಂಗು, ನೆಲಗಡಲೆ ಬೆಳೆಯಲಾರಂಭಿಸಿದ್ದಾರೆ. ಕೃಷ್ಣಸ್ವಾಮಿಗಳು ಡೈರಿಯಲ್ಲಿ-ಅನುಭವದಿಂದ, ಸೂಕ್ಷ್ಮ ಅವಲೋಕನದಿಂದ, ಒಂದೊಂದು ಬೆಳೆಯ ಬಗ್ಗೆಯೂ ವಿವರವಾದ ಮಾಹಿತಿಗಳನ್ನು ಬರೆದಿಟ್ಟುಕೊಂಡಿದ್ದಾರೆ. ಜಗುಲಿಗೆ ಬಂದವರಿಗೆಲ್ಲ 'ಅಲ್ಫೋನ್ಸೋ' ಎಂಬ ಮಾವಿನ ಹಣ್ಣಿನ ಬಗ್ಗೆ; ರೋಹಿಣಿ ಹತ್ತಿಯ ಬಗ್ಗೆ, ಜವುಳಿ ನೆಲಗಡಲೆ ಬಗ್ಗೆ ಸವಿಸ್ತಾರ ಹೇಳಿ ನೀವು ಇಂಥ ಬೆಳೆ ತೆಗೆಯಿರೆಂದು ಕಿವಿಮಾತನ್ನು ತಮ್ಮ ಕರ್ತವ್ಯವೆಂಬಂತೆ ಅವರು ಹೇಳುತ್ತಾರೆ.

o o o

ಹೀಗೆ ನಿಧಾನಕ್ಕೆ ತುಸುತುಸುವೆ ದೊಡ್ಡದಾಗತೊಡಗಿದ ಮಲ್ಲಿಗೆ ಹಳ್ಳಿಯ ಮಕ್ಕಳು ಪ್ರಾಥಮಿಕ ಹಿರಿಯ ಶಾಲೆ ಬಿಟ್ಟರೆ ಮಿಕ್ಕಂತೆ ಓದಿಗೆ ಕಾಲುನಡಿಗೆಯಿಂದಲೇ ಅರಸೀಕೆರೆಗೆ ಹೋಗುವುದು ಕೃಷ್ಣಸ್ವಾಮಿಗೆ ಬಹುವಾಗಿ ಕಾಡತೊಡಗಿತು. ಬಸಾಪುರ, ಬಾಣಾವರ, ಸಂಪಿಗೆ ಹಳ್ಳಿಗಳಿಗೆ ಸೇರಿದಂತೆ ಹೈಸ್ಕೂಲೊಂದನ್ನು ತುಸು ಪ್ರಯತ್ನಪಟ್ಟರೆ ಈ ಊರಿಗೆ ತರಬಹುದೆಂದು ಅವರಿಗನ್ನಿಸಿತು. ಅಲ್ಲದೆ ಹೈಸ್ಕೂಲಿನ ಓದಿಗಾಗಿ ಭಾಗೀರಥಿ, ನಾರಾಯಣ ಪಟ್ಟ ಕಷ್ಟವನ್ನು ಅವರು ಕಣ್ಣಾರೆ ಕಂಡಿದ್ದರು. ಮುಂದೆ ಬೆಳೆದು ದೊಡ್ಡರಾಗುವ ತಮ್ಮ ಮಕ್ಕಳೂ ಸಹ ಮೊದಲ ಫಾರ್ಮು ಮುಗಿದದ್ದೇ ಹೈಸ್ಕೂಲಿಗೆಂದು ಅರಸೀಕೆರೆಗೆ ಹೋಗಬೇಕಿರುವುದು ; ಹಾಗೆ ಅರಸೀಕೆರೆಗೆ ಹೋಗ

ಲಾರದ ಎಷ್ಟೋ ಬಡವರು ಓದನ್ನು ಅರ್ಧದಲ್ಲೇ ನಿಲ್ಲಿಸಿದ ಅನೇಕ ಘಟನೆಗಳು ಅವರ ಕಣ್ಮುಂದೆ ಸುಳಿದವು. ಇನ್ನವರು ತಡಮಾಡಲಿಲ್ಲ. ತಲೆಗೆ ಜರಿಯಪೇಟ ಏರಿಸಿದರು. ಹುರಮಂಜು ಬಣ್ಣದ ಕೋಟು ತೊಟ್ಟರು. ಕಾಲಿಗೆ ಚಪ್ಪಲಿ ಮೆಟ್ಟಿದರು. ಕೈಯಲ್ಲಿ ಕೊಡೆ, ಕೈಗೆ ಯಾವಾಗಲೂ ಅರಸೀಕೆರೆಗೆ ಒಯ್ಯುವ ಚೀಲ ಹಿಡಿದರು. ಅರಸೀಕೆರೆಯ ಏ ಇ ಓ, ಹಾಸನದ ಅಧಿಕಾರಿಗಳೆಂದು ತಿಂಗಳೊಪ್ಪತ್ತು ಓಡಾಡಿದರು. ಊರಿನ ಹಿರೀಕರ ಸಹಿ ಸಂಗ್ರಹಿಸಿದರು. ಅಧಿಕಾರಿಗಳ ಗುಂಪೊಂದು ಬಂದು ಸ್ಥಳ ವೀಕ್ಷಣೆ ನಡೆಸುವಂತೆ ಏರ್ಪಾಡಾಯಿತು. ಸರಿಯಾದ ಕಟ್ಟಡ ಸಿಗದಾದಾಗ ಊರಿನ ದನಗಳ ಕೊಂಡವಾಡೆಯನ್ನೇ ಸುತ್ತೂರುಗಳಿಂದ ಅಷ್ಟಿಷ್ಟು ಹಣ ಪಟ್ಟಿ ಮಾಡಿ ರಿಪೇರಿ ಮಾಡಿಸಿದರು. ಕಡೆಗೂ ಮಲ್ಲಿಗೆ ಹಳ್ಳಿಗೆ ಹೈಸ್ಕೂಲು ಬಂತು. ಮತ್ತೊಮ್ಮೆ ಅಧಿಕಾರಿಗಳು ಬಂದು ಹಳ್ಳಿಗಳಲ್ಲಿ ಮೊದಲ ಫಾರ್ಮು ಪಾಸಾಗಿ ಮುಂದಿನ ಓದಿಗೆ ಹೋಗದೆ ಮನೆಗಳಲ್ಲಿ ಕೂತ ಮಕ್ಕಳನ್ನು ಮಲ್ಲಿಗೆ ಹಳ್ಳಿ ಹೈಸ್ಕೂಲಿಗೆ ಕಳಿಸುವಂತೆ ಸರ್ವೆ ನಡೆಸಿದರು. ಕೃಷ್ಣಸ್ವಾಮಿ ಈ ಎಲ್ಲ ಕೆಲಸಗಳ ಹಿಂದೆ ಬಿಡುವಿಲ್ಲದೆ ಓಡಾಡಿದರು. ಹೈಸ್ಕೂಲಿಗೆ ಸಧ್ಯಕ್ಕೆ ಒಬ್ಬ ಎಚ್ಚೆಮ್ಮು, ಇಬ್ಬರು ಮೇಷ್ಟರನ್ನು ಕಳಿಸುವುದಾಗಿ ಶಿಕ್ಷಣ ಅಧಿಕಾರಿಗಳು ಆಶ್ವಾಸನೆ ನೀಡಿದರು....

ಹೈಸ್ಕೂಲು ತಮ್ಮ ಕೈಯಳತೆಯಲ್ಲೇ ಮಲ್ಲಿಗೆ ಹಳ್ಳಿಗೆ ಹೆಚ್ಚಿನ ಪಿಚುಪೇಚಿಲ್ಲದೆ ಬಂದದ್ದೇ ಸಮಾಧಾನದ ಉಸಿರು ಬಿಟ್ಟಿದ್ದ ಕೃಷ್ಣಸ್ವಾಮಿಗೆ ಮತ್ತೊಂದು ಯೋಚನೆ ಬಂತು. ಇಷ್ಟು ದಿನ ಊರು ಬೆಳೆದಿದ್ದರೂ ಇನ್ನೂ ಬೀದಿಗಳಲ್ಲಿ ಕಂಬದ ಕಲ್ಲೆಣ್ಣೆ ದೀಪಬಿಟ್ಟರೆ ವಿದ್ಯುದ್ದೀಪ ಬಂದಿರಲಿಲ್ಲ. ಮನೆಗಳಲಂತೂ ಔಡಲದ್ದೋ, ಕಡಲೆಯದೋ, ಸೀಮೆಯದೊ ಎಂಥದೊ ಎಣ್ಣೆಯಿಂದ ದೀಪ ಉರಿಸುತ್ತಿದ್ದರು. ಕೃಷ್ಣಸ್ವಾಮಿಗಳು ಈಗ ಮತ್ತೆ ಮುಂದಾದರು—ಮಲ್ಲಿಗೆ ಹಳ್ಳಿ ಬೆಳಕಿನಿಂದ ಝುಗಝುಗಿಸಿತು ! ಹಳೆಯ ಕಲ್ಲೆಣ್ಣೆ ಕಂಬಗಳನ್ನು ಆಳುಗಳು ಹೋಲೀಲಿಲೊ ಹೈಸೋ—ಎನ್ನುತ್ತ ಹೊತ್ತೊಯ್ದರು. ದೊಡ್ಡೂರುಗಳನ್ನು ನೋಡದ ಜನ ವಿದ್ಯುದ್ದೀಪ ಬಂದಾಗ ಮೂಗಿಗೆ ಬೆರಳಿಟ್ಟು ಕಂಬಗಳ ಸುತ್ತಲೂ ತಲೆ ಮೇಲೆತ್ತಿ ನೋಡುತ್ತ ತಿರುಗಿದರು. ಕೆಲವರು ಕಂಬಕ್ಕೆ ಕಿವಿಯಿಟ್ಟು ಅದರೊಳಗಿನ ಸದ್ದನ್ನು ಆಲಿಸಿದರು.... ವಿದ್ಯುದ್ದೀಪದಿಂದ ಹಳ್ಳಿಯ ಕಳೆಯೆ ಬದಲಾಗಿ ಹೋಯಿತು. ಮೊವಲಿಗೆಲ್ಲ ಒಂದು ಕಟ್

ರೂಟ್ ಟ್ರಿಪ್ಪನ್ನು ಮಾತ್ರ ಹೊಡೆಯುತ್ತಿದ್ದ "ಸಕಲೇಶಪುರ ಪ್ರಿಬೀಟ್" ಬಸ್ಸೊಂದು ರಾತ್ರಿ ಒಂಬತ್ತಕ್ಕೆ ಅರಸೀಕೆರೆಗೆ ಬರತೊಡಗಿತು. ಇದರಿಂದ ಹಳ್ಳಿಯಲ್ಲಿ ಗೆಯ್ಮೆಯಿಲ್ಲದ ರಿಕಾಮಿಗಳಿಗೆ ಬಹಳ ಅನುಕೂಲವಾಯಿತು. ಅಂಥ ವರೆಲ್ಲ ರಾತ್ರಿ ಒಂಭತ್ತರ ಬಸ್ಸಿಗೆ ಅರಸೀಕೆರೆಗೆ ಹೋಗಿ ಅಲ್ಲಿ ಸೆಕೆಂಡ್ ಷೋ ನೋಡಿ, ಸಿಳ್ಳು ಹಾಕುತ್ತ ನಡೆದುಕೊಂಡು ವಾಪಸ್ಸು ಬರಲಾಂಭಿಸಿದರು. ಇದನ್ನರಿತ ಕೋಮಟಿಗನೊಬ್ಬ ಮಲ್ಲಿಗೆ ಹಳ್ಳಿಯಲ್ಲೇ ಟೂರಿಂಗ್ ಟೆಂಟ್ ಥೇಟರೊಂದನ್ನು ತಂದು ಜಡಿದ ! ಈ ಟೆಂಟಿನೊಂದಿಗೇ ಕೃಷ್ಣಸ್ವಾಮಿಗಳ ಮನೆಯ ಮುಂದಿನ ಕೋಣೆಗೆ ಅಂಚೆ ಕಛೇರಿಯೂ ಬಂತು.

ಇವೆಲ್ಲ ಅಲ್ಲಿನ ಹಳೆಯ ಕಾಲದ ಜನರಿಗೆ ದಂಗು ಬಡಿಸಿದ್ದವು. ಟೆಂಟ್ ಥೇಟರಿನ ಭಯಂಕರ ಶಬ್ದ ಕೇಳಿಯಂತೂ ಟೆಂಟಿನ ಪಕ್ಕದ ಗುಡಿಸಲಿನ ಮುದುಕಿ ಯೊಬ್ಬಳು ಸಿದ್ದರಗುಡ್ಡದ ಕಡೆಗೆ ಓಡಿದ್ದಳು ! ಹೆಚ್ಚಿನವರಿಗೆ ಈ ಬದಲಾ ವಣೆಗಳೆಲ್ಲ ತಂದದ್ದು ಖುಷಿಯನ್ನೇ ಮೇಲಾಗಿ–ಸ್ವಾಮೇರು ಮಾಡ್ತಾರಂದ್ರೆ, ಒಳ್ಳೇದಕ್ಕೆ–ಎಂಬುದು ಅವರೆಲ್ಲರ ಅಭಿಪ್ರಾಯ.

o o o

ಕೃಷ್ಣಸ್ವಾಮಿಗಳಿಗಾದರೂ ತೆಂಗು ಬೆಳೆಗಾರರ ಸಂಘದ ಕೆಲಸ ; ಅವರ ವರ ಪಟ್ಟಾ, ಕೋರ್ಟು ಕಛೇರಿ ಕೆಲಸಗಳಿಂದು ಒಂದು ನಿಮಿಷವೂ ಬಿಡುವಿಲ್ಲ. ಇಂಥ ಕೆಲಸಗಳಿಂದ ತತ್ಕಾಲೀನ ಬಿಡುಗಡೆಗೆ ಅವಕಾಶವೊಂದು ಬಂತು.

# ಒಂದು ಸಕುಟುಂಬ ಯಾತ್ರೆ

---

ಮಗನ ಬಿಡುವಿಲ್ಲದ ದುಡಿತ ನೋಡಿದ ಗೋದಾವರಿಬಾಯಿಗೆ ಬಹಳ ಕೆಟ್ಟೆನಿಸಿತು. ತಾವಾದರೂ ಮೂವರು ಮೊಮ್ಮಕ್ಕಳನ್ನು ಆಡಿಸುತ್ತ ಕಾಲ ಕಳೆಯುತ್ತೇನೆ. ಸುಭದ್ರೆ– ಮಕ್ಕಳು, ಅಡುಗೆಮನೆ ಎಂದು ಗಡಿಬಿಡಿಯಲ್ಲಿರುತ್ತಾಳೆ. ಈ ಕೃಷ್ಣನಾದರೊ– ಅವರಿವರಿಗೆ ಪತ್ರ ಬರೆದುಕೊಂಡು ಅದು–ಇದು ಎಂದು ಯಾವಾಗಲೂ ಕೆಲಸ ಹಚ್ಚಿಕೊಂಡು ಕೊರಗುತ್ತಾನೆ. ಅವನಿಗೆ ಬಿಡುವು ಸಿಕ್ಕಿ ಹೆಂಡತಿ, ಮಕ್ಕಳೊಂದಿಗೆ ಮಾತುಕತೆಗೆ ಸಮಯ ಸಿಕ್ಕುವುದು ಸಂಜೆಯಾದ ಮೇಲೆ! ಈಗೀಗಲಂತೂ ತನಗೆ ಕಣ್ಣಿನ ಬೆಳಕು ಮಂದವಾಗಿ ಕತ್ತಲಾದ ಮೇಲೆ ಅಡುಗೆಮನೆ– ಹಿತ್ತಿಲು ಎಂದು ಓಡಾಡಬೇಕಾದರೂ ಅಲ್ಲಲ್ಲಿನ ಕಂಬಕ್ಕೆ ಕೈ ಸವರುತ್ತ ಹೋಗಬೇಕು. ಹೀಗಾಗಿ ಮೊದಲಿನಂತೆ ಯಾವ ಕೆಲಸವೂ ಸರಾಗವಾಗಿ ನೀಗುವುದಿಲ್ಲ. ಅದೂ ಅಲ್ಲದೆ ಈಗ ಮೊಮ್ಮಕ್ಕಳು ತಮ್ಮೆದುರೆ ಕೂತು ತಾನು ಆಡಿಸಿದ ಆಟವನ್ನು ಎಲ್ಲಿ ಕೇಳಿಯಾವು? ಅವೂ ದೊಡ್ಡವಾಗಿವೆ. ತಾತನ, ಮುತ್ತಾತನ ಹೆಸರನ್ನು ಒಟ್ಟಿಗೆ ಇಟ್ಟುಕೊಂಡಿರುವ ನರಸಿಂಹ ಮೂರನೆ ಕ್ಲಾಸಂತೆ. ಅವನ ಹಿಂದಿನ ಶಾರದೆಯೂ ಚಡ್ಡಿ ಏರಿಸಿಕೊಂಡು, ಸ್ಲೇಟು ಹಿಡಿದು ಓಡುವ ಅಣ್ಣನ ಕೈ ಹಿಡಿದು ನಡೆದು ಬಿಡುತ್ತಾಳೆ. ಇನ್ನು ವರ್ಷದ್ದೊ–ಎರಡು ವರ್ಷದ್ದೋ ಈ ಶ್ರೀನಿವಾಸ? ಮೊನ್ನೆ ಹುಟ್ಟಿದ ಹಾಗಿದೆಯಲ್ಲ? ಅದಂತೂ ಅಮ್ಮನ ಬಗಲು ಬಿಟ್ಟು ಇಳಿಯುವುದೇ ಇಲ್ಲ. ಬಾರೋ ಮರಿ ಎಂದರೆ ಉವ್ವುವ್ವು

ಎಂದು ಹಲ್ಲು ಕಚ್ಚಿ ಆಣಕಿಸುತ್ತ ಬೇರೆ! ಶಾಲೆಗೆ ಹೋದ ಮಕ್ಕಳೋ ಬರುವುದು ಸಂಜೆಯೇ. ಈ ಸುಭದ್ರೆಯಂತೂ ಮನೆಗೆಲಸವನ್ನೆಲ್ಲ–ಅಮ್ಮ ನಿಮಗೆ ಆಯಾಸ ಆಗುತ್ತೆ, ಮಾಡಬೇಡಿ, ಸುಮ್ಮನೆ ಕೂತುಕೊಳ್ಳಿ.... ಎಂದು ತಾನೇ ಮಾಡಿಬಿಡುತ್ತಾಳೆ. ಹೀಗಾಗಿ ಕೆಲಸವಿಲ್ಲದೆ ಮಧ್ಯಾಹ್ನವೆಲ್ಲ ಬೇಸರ. ಊರಲ್ಲಿದ್ದಾಗ ಊಟಕ್ಕೆಂದು ಮಧ್ಯಾಹ್ನ ಮನೆಗೆ ಬರುವ ಕೃಷ್ಣನಿಗೆ ಆಡಿಯೂ ತೋರಿಸಿದೆ- ಕಂದಾ ಕಿಟ್ಟಪ್ಪಾ, ಮನೆ ಯಾಕೋ ಭಣಭಣ ಅನ್ನುತ್ತದೆಯೋ, ಈ ಶೀನ ಹುಟ್ಟಿ ಎರಡು ವರ್ಷವಾಯಿತೇನೊ ? ಮನೆಯಲ್ಲಿ ಬಾಣಂತನ ಅದು ಇದೂಂತ ಇಲ್ಲದೆ ಬೇಸರವಾಗಿದೆಯಪ್ಪಾ....ಎಂದು.

ಇದರಲ್ಲಿ ಪಾಪ, ಕೃಷ್ಣಸ್ವಾಮಿಗಳದೇನೂ ತಪ್ಪಿರಲಿಲ್ಲವೆಂದೂ ಗೋದಾವರೀಬಾಯಿಗೆ ಗೊತ್ತಿರಲಿಲ್ಲ! ಒಂದು– ಕೃಷ್ಣಸ್ವಾಮಿಗಳು ಎಷ್ಟೇ ಆತುರದವರಾದರೂ ಮಕ್ಕಳು ಬೆಳೆದು ಸ್ವಲ್ಪ ದೊಡ್ಡವರಾಗಿರುವುದರಿಂದ ಸುಭದ್ರೆ ಅಂಥದ್ದಕ್ಕೆಲ್ಲ ಮೊದಲಿನಷ್ಟು ಆಸ್ಪದ ಕೊಡುತ್ತಿರಲಿಲ್ಲ. ಎರಡು– ಕಂಪನಿ ಸರ್ಕಾರ ಹೋಗಿ ಸ್ವದೇಶಿಗಳ ಸರ್ಕಾರ ಬಂದ ಮೇಲೆ ಕುಟುಂಬ ಯೋಜನೆಯ ಪ್ರಚಾರ ಭರಪೂರ ನಡೆಯಿತು. ಕೃಷ್ಣಸ್ವಾಮಿಗಳು ಹಲವೆಂಟು ಪೇಟೆ ಸುತ್ತಿದ್ದರಿಂದ ಮಕ್ಕಳು ಹೆಚ್ಚಾದರೆ ಸುಭದ್ರೆಗೆ ನೋಡಿಕೊಳ್ಳುವುದು ಪ್ರಯಾಸವಾದೀತೆಂದು ಈ ಮೇಲಿನ ಯೋಜನೆಯನ್ನು ಕೈಗೊಂಡಿದ್ದರಷ್ಟೇ! ಈಗ ಅಮ್ಮ ಇನ್ನೊಂದು ಮಗು ಬಯಸುತ್ತಿದ್ದಾಳೆ! ಆಕೆ ಮಗುವಿನೊಂದಿಗೆ ಆಟಪಾಟವಾಡಿಕೊಂಡು ಖುಷಿಯಿಂದ ಇರುವುದಾದರೆ ಯಾಕೆ ಮತ್ತೊಂದು ಮಗುವಿನ ಬಗ್ಗೆ ಆಲೋಚಿಸಬಾರದು ಎಂಬ ವಿಚಾರ ಸುಳಿದು ಹೋಯಿತು. ಅಮ್ಮ ಇತ್ತೀಚೆಗೇಕೊ ತೀರ ಮಂಕಾಗಿರುತ್ತಾಳೆ. ಆಕೆ ಲವಲವಿಕೆಯಿಂದಿರುವುದು ಮುಂಜಾನೆ–ಸಂಜೆ ಮಕ್ಕಳ ಗದ್ದಲವಿದ್ದಾಗ. ಅತಿ ಖುಷಿಯಾಗಿರುವುದು ಮುಂಗಾರು ಮಳೆ ಕಳೆದು ಫಸಲು ಕೈಗೆ ಬರುವ ಸಮಯದಲ್ಲಿ ಭಾಗೀರಥಿ ಹಳ್ಳಿಗೆ ಬಂದಾಗ. ಇಂಥ– ಆಯತವೇಳೆಯಲ್ಲಿಯೇ ಗೋದಾವರಿಬಾಯಿ ಸಲಹೆ ನೀಡಿದರು.

ಪ್ರಿಯ ಓದುಗ,

ಮತ್ತೊಂದು ಮಗುವಿನದಲ್ಲ! ಅದಂತೂ ಆಗೀಗ ಕೊಡುತ್ತಿರುವ ಸಲಹೆಯಷ್ಟೇ. ಅದರೊಂದಿಗೆ ಸೇರಿಕೊಂಡ ಹೊಸ ಸಲಹೆ– ನೋಡೋ,

ಕೃಷ್ಣಾ, ನನಗೂ ಕಣ್ಣು ಮಂಜಾದವು, ವಯಸ್ಸಾಯ್ತು. ನನ್ನದೇನು ಆಗಲೋ-ಈಗಲೋ. ಬದುಕಿರೋವಾಗ್ಲೇ ಇನ್ನೊಮ್ಮೆ ಶೃಂಗೇರಿ-ಧರ್ಮ ಸ್ಥಳ ನೋಡುಕ್ಕೆ ಆಸೆಯಾಗ್ತಿದೆ. ನನ್ನ ಮದುವೆಯಾದ ಹೊಸತರಲ್ಲಿ ನಿನ್ನ ಅಪ್ಪಯ್ಯ ಯಾವಾಗ್ಲೋ ಕರ್ಕೊಂಡು ಹೋಗಿದ್ರು, ಆ ಎರಡು ಕ್ಷೇತ್ರ ನೋಡುಕ್ಕೆ ಆಗ ಹದಿನೈದು ದಿನ ಹಿಡಿದುತ್ತೂನ್ನು.... ಈಗೇನು ಮೋಟಾರು-ಮಣ್ಣು ಇವೆಲ್ಲ.... ಹಾಗೇ ಭಾಗೀನ್ನೂ ನೋಡಿದ ಹಾಗಾಗುತ್ತೆ. ಏನಂತೀಯ ?....

ಕೃಷ್ಣಸ್ವಾಮಿಗಳಿಗೂ ಮನೆಯವರೊಂದಿಗೆ ಆರಾಮವಾಗಿ ಎಲ್ಲಾದರೂ ಕೆಲವು ದಿನ ಸುತ್ತಾಡಿ ಬರಬೇಕು ಎಂದೆನಿಸಿದ್ದಿದೆ. ತಾವಾದರೂ ಮೈಸೂರು-ಹಾಸನ ಎಂದು ಸುತ್ತಾಡುವುದಿದ್ದೆ ಇದೆ. ಅಮ್ಮ-ಸುಭದ್ರೆ, ಮಕ್ಕಳು ಈ ವರ್ಷಗಳಲ್ಲಿ ಎಲ್ಲೂ ಹೋದವರಲ್ಲ. ವರ್ಷಕ್ಕೊ ; ಎರಡು ವರ್ಷಕ್ಕೊ ಭಾಗೀರಥಿಯೇ ಮಲ್ಲಿಗೆ ಹಳ್ಳಿಗೆ ಬಂದಿದ್ದಳೆ ಹೊರತು ಇವರೆಂದೂ ಅಲ್ಲಿಗೆ ಪೋಗಿರಲಿಲ್ಲ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ತಂಗಿ-ಭಾವಮೈದುನರಿಗೆ ಒಂದು ಕಾಗದ ಬರೆದು ಹಾಕಿದರು. ನಾವೆಲ್ಲ ತೀರ್ಥಹಳ್ಳಿಗೆ ಬರುವವರಿದ್ದೇವೆ. ಎಲ್ಲರೂ ಅಲ್ಲಿಂದಲೇ ಧರ್ಮಸ್ಥಳ, ಶೃಂಗೇರಿಗೆ ಹೋಗುವ, ಬಾಕಿ ಯಾವತ್ತೂ ಕ್ಷೇಮ, ನಿಮ್ಮ ಕ್ಷೇಮ ಸಮಾಚಾರ ಮೇಲಿಂದ ಮೇಲೆ ತಿಳಿಸಬೇಕು.... ಇತ್ಯಾದಿ.

ಮನೆಯಲ್ಲಿ ಯಾತ್ರೆಯ ವಿಚಾರ ಹೊಸ ಸಂಚಲನವನ್ನುಂಟು ಮಾಡಿತು ಎಲ್ಲರಿಗೂ ಹೊಸ ಹುರುಪು ತುಂಬಿಕೊಂಡಿತು. ಅತ್ತೆ ಗೋದಾವರಿಬಾಯಿ, ಸೊಸೆ-ಸುಭದ್ರಮ್ಮ ಸೇರಿಕೊಂಡು ದಾರಿಗೆಂದು ; ಭಾಗೀರಥಿಯ ಮನೆಗೆಂದು ತಿಂಡಿಗಳ ರಾಶಿಯನ್ನೇ ಒಟ್ಟಿದರು. ಕೋಡುಬಳೆ, ಎರೆಯಪ್ಪ, ಗುಲಪಾಟೆ, ಬಾಣಾವರಬಿಲ್ಲೆ, ಹಾಲುಬಾಯ್, ಚಕ್ಕುಲಿ, ಮಾಕಳಿಬೇರಿನ ಉಪ್ಪಿನಕಾಯಿ.... ಹೀಗೆ.

ಸುಭದ್ರೆಯಂತೂ ಎಲ್ಲರ ಬಟ್ಟೆ ಬರೆ ಎಂದು ಟ್ರಂಕಿಗೆ ತುಂಬಲು ಮೂರು ದಿನ ತೆಗೆದುಕೊಂಡಿದ್ದಳು. ಮಕ್ಕಳು ಹಾಗೆ ಅಮ್ಮ ಬಟ್ಟೆಗಳನ್ನು ಟ್ರಂಕಿಗೆ ಪೇರಿಸುವಾಗ ಸುತ್ತ ಕುಳಿತು ಕುತೂಹಲದಿಂದ ನೋಡುವವು. ತಾಯಿ ಒಂದೊಂದೇ ಸಾಮಾನು ಜೋಡಿಸಿ ಒಳಗೆ ಸೇರಿಸಿದೊಡನೆ ಬಗಲಲ್ಲಿನ

ಶ್ರೀನಿವಾಸ ಒಂದೊಂದೇ ಹೊರಗೆಳೆದು ಹಾಕುವನು. ಅವನಿಗೇತರದೋ ಸಂಭ್ರಮ. ನರಸಿಂಹ– ಶಾರದೆ ಅತ್ತೆ ಊರಿಗೆ ಎಂದು ಉಬ್ಬಿಹೋಗಿದ್ದವು. ತುಸು ಉಬ್ಬು ಹಲ್ಲಿನ ನರಸಿಂಹನಂತೂ ತನ್ನ ಜತೆ ಆಡಲು ಅತ್ತೆಯ ಮಗ ಗೋವಿಂದನಿರುತ್ತಾನೆಂದು ಸಡಗರಪಟ್ಟುಕೊಂಡ. ಅಂತೂ ಇವರೆಲ್ಲರ ವಾರದ ತಯಾರಿ ಮುಗಿಯಿತು. ಕೃಷ್ಣಸ್ವಾಮಿಗಳು ತೋಟದ– ಮನೆಯ ಜವಾಬ್ದಾರಿಯನ್ನು ಬೇಸಾಯಗಾರರಿಗೆ ವಹಿಸಿದ್ದಾಯ್ತು. ಪೋಸ್ಟಾಫೀಸನ್ನು ಮಾತ್ರ ಹೈಸ್ಕೂಲು ಮೇಷ್ಟ್ರು ವಿರೂಪಾಕ್ಷಪ್ಪ ಮೂರುದಿನಕ್ಕೊಮ್ಮೆ ಬಂದ ಅಂಚೆಯನ್ನು ಬಟವಾಡೆಯನ್ನು ನೋಡಲು; ವಿತರಿಸಲು ಒಪ್ಪಿಕೊಂಡು ತೆರೆಯುವುದಾಗಿ ಹೇಳಿದ್ದ. ಕೃಷ್ಣಸ್ವಾಮಿಗಳು ನರಸಿಂಹ–ಶಾರದೆಯರನ್ನು ಶಾಲೆಬಿಡಿಸಿ ಕರೆದೊಯ್ಯುತ್ತಿರುವುದರಿಂದ ಹೆಡ್‌ಮೇಷ್ಟ್ರರಾದಿಯಾಗಿ ಮೂರೂ ಜನರಿಗೆ ಒಂದಿಷ್ಟು ಗಿಟುಗುಗಳನ್ನು ಚೀಲದಲ್ಲಿ ಹಾಕಿ ಕಳಿಸಿದ್ದರು ! ಇನ್ನು ವಾರದಷ್ಟು ಕಾಲ ತಾವು ಊರಲ್ಲಿರುವುದಿಲ್ಲವೆಂದು ರೈತಾಪಿ ಜನರಿಗೆ ಮುಂಚಿತವಾಗಿಯೇ ತಿಳಿಸಿ, ಅವರ ಕೋರ್ಟು– ಕಛೇರಿ ವ್ಯವಹಾರಗಳನ್ನು ಇನ್ ಅಡ್ವಾನ್ಸ್ ಮುಗಿಸಿಕೊಟ್ಟಿದ್ದರು. ಹಳ್ಳಿಯಲ್ಲಿನ ಕೆಲವು ಕಾಮಚೋರ ಜನರಿಗೆ ಮಾತ್ರ ವಾರಕಾಲ ಕೃಷ್ಣಸ್ವಾಮಿಗಳ ಮನೆಜಗುಲಿ ಖಾಲಿಯಾಗಿ, ಬಾರಿಸಿ ಹೊಡೆಯಲು ಸುದ್ದಿಗಳಿಲ್ಲದ ತುಸು ಬೇಸರ ತರಿಸಿತ್ತು.

ಮಕ್ಕಳು, ಸುಭದ್ರಮ್ಮ, ಕೃಷ್ಣಸ್ವಾಮಿಗಳದು ಒಂದು ರೀತಿಯ ತಯಾರಿಯಾದರೆ ಗೋದಾವರಿಬಾಯಿಯದು ಬೇರೆ. ಅವರು ತಮ್ಮದೊಂದು ಸೀರೆಗಳ ಗಂಟನ್ನು ಪ್ರತ್ಯೇಕವಾಗಿ ಕಟ್ಟಿಕೊಂಡರು. ಜತೆಗೆ ತಿರುಗಣಿತಂಬಿಗೆಯಲ್ಲಿ ನೀರು ತುಂಬಿಕೊಂಡರು. ಹಲ್ಲಿಗೆ ಬರುವುದಿಲ್ಲವೆಂದು ದಾರಿಗಾಗಿ ಕುಟ್ಟವಲಕ್ಕಿ ಮಾಡಿಕೊಂಡರು.... ಹೊರಡುವ ದಿನ ಮನೆಗೆ ಹಾಕಿದ ಬೀಗವನ್ನು ಎರಡೆರಡು ಸಲ ಎಳೆದು ನೋಡಿದ ಮೇಲೆ ಪ್ರಯಾಣ ನಸುಕಿನ ಕಂಪನಿ ಬಸ್ಸಿನಲ್ಲಿ ಹಾಸನಕ್ಕೆ ಹೊರಟಿತು. ಅಲ್ಲಿಂದ ತೀರ್ಥಹಳ್ಳಿ ತಲುಪಿದ ಮೇಲೆ ಮುಂದಿನ ಯಾತ್ರೆ ಭಾಗೀರಥಿಯ ಸಂಸಾರದೊಂದಿಗೆ ಆರಂಭವಾಗುವುದಿತ್ತು....

೦ ೦ ೦

ಮಲ್ಲಿಗೆಹಳ್ಳಿ ಬಿಟ್ಟ ಮೂರನೆದಿನ ಸಂಜೆ ಇವರೆಲ್ಲ ತೀರ್ಥಹಳ್ಳಿಯಿಂದ ಎತ್ತಿನ ಗಾಡಿಯಲ್ಲಿ ಸೀತಾನದಿಗೆ ಹೋಗಿ ಇಳಿದರು. ಸುರೇಂದ್ರ–ಭಾಗೀರಥಿಗೆ ಇವರು ಬರುವ ವಿಚಾರ ಟಪಾಲಿನ ಮೂಲಕ ತಿಳಿದಿದ್ದರಿಂದ ಅವರು ದಾರಿ ಕಾಯುತ್ತ ಕುಳಿತಿದ್ದರು. ಮಕ್ಕಳೆಲ್ಲ ಬಹಳ ಖುಷಿಯಲ್ಲಿದ್ದರು. ಸೀತಾನದಿ ಸುರೇಂದ್ರನ ಸ್ಥಿತಿ ಈಗ ಸಾಕಷ್ಟು ಸುಧಾರಿಸಿದ್ದರಿಂದ ಈಗಿದ್ದ ಮನೆಯ ಪಕ್ಕ ದಲ್ಲಿಯೇ ನಾಲ್ಕು ಗೋಡೆಯೆಬ್ಬಿಸಿ ಸೋಗೆ–ಥರ್ಬೆಯ ಮಾಡು ಮಾಡಿದ್ದ. ಮನೆಗೆ ಕರೆಂಟೂ ಬಂದಿತ್ತು.

ಆ ದಿನ ಬಂದಾಗಲೇ ರಾತ್ರಿಯಾಗಿದ್ದರಿಂದ ಗೋದಾವರಿಬಾಯಿಯ ಹೊರತಾಗಿ ಎಲ್ಲರೂ ಊಟಮಾಡಿ ಮಲಗಲು ಅಣಿಯಾದರು. ಗೋದಾವರಿ ಬಾಯಿ ಮಾತ್ರ ನರಸಯ್ಯನವರ ಮರಣದ ನಂತರ ರಾತ್ರಿ ಊಟ ಬಿಟ್ಟುಬಿಟ್ಟಿದ್ದರು. ಏನಿದ್ದರೂ ರಾಗಿಹಿಟ್ಟಿನ ಹುರಿಟ್ಟು, ಇಲ್ಲ ಅವಲಕ್ಕಿ ಮೊಸರು ಬಾಯಿಗೆ ಹಾಕಿ ನೀರುಕುಡಿದರೇದರೆ ಅವರ ಫರಾಳ ಮುಗಿಯಿತು. ಅವರಿಗೆ ತಮ್ಮ ಮಗಳೊಂದಿಗೆ ಖಾನೆಸುಮಾರು ಮಾತಾಡಬೇಕೆಂದಿದ್ದರೂ ಪ್ರಯಾಣದ ಆಯಾಸದಿಂದಾಗಿ, ವಯಸ್ಸಿನ ಭಾರದಿಂದಾಗಿ ಅವರ ಕಣ್ಣುಗಳು ನಿದ್ದೆಗೆ ಎಳೆಯುತ್ತಿದ್ದವು. ಆದರೂ ಮಗಳು–ತಾಯಿ–ಸೊಸೆ ಕೂತು ಎಷ್ಟೋ ಹೊತ್ತು ಮಾತುಕತೆ ನಡೆಸಿದರು. ಮಕ್ಕಳು ದಣಿದಿದ್ದರಿಂದ ಯಾವುದೋ ಮೂಲೆಸೇರಿ ಮಲಗಿಬಿಟ್ಟಿದ್ದವು. ಈ ಮೂರು ಹೆಂಗಸರು ನಡುಮನೆಯ ಜಗುಲಿಯಲ್ಲಿ ಹರಟೆ ಹೊಡೆಯುತ್ತಿದ್ದರೆ ಕೃಷ್ಣಸ್ವಾಮಿ ಮತ್ತು ಸುರೇಂದ್ರ ಮನೆಯೆದುರೇ ಇದ್ದ ಕಾಡಿನತ್ತ ಒಂದೆರಡು ಹೆಜ್ಜೆ ನಡೆದು ಬರಲು ಹೊರ ಟರು. ಜಿಲ್ಲೆಯಲ್ಲೆಲ್ಲ ಪ್ರಸಿದ್ಧಿಪಡೆದ, ಆದರೂ ತುಸುವೇ ಬದಲಾವಣೆ ಇಲ್ಲದ ಕೃಷ್ಣಸ್ವಾಮಿಯನ್ನು ಕಂಡು ಸುರೇಂದ್ರನಿಗೆ ಆಶ್ಚರ್ಯ. ತಾನು ನೋಡುತ್ತಿರುವ ಹಾಗೇ ಎಷ್ಟೆಲ್ಲ ಸ್ವತಹ ಪರಿಶ್ರಮದಿಂದ ಬೆಳೆದ ಭಾವನ ಕುರಿತು ತನಗರಿವಿಲ್ಲದಂತೆಯೇ ಅಪಾರ ಗೌರವ. ಅದಕ್ಕೆ ತಕ್ಕಹಾಗೆ ಕೃಷ್ಣ ಸ್ವಾಮಿ ದಾರಿಯಲ್ಲಿ ಬೆಳೆಯಲ್ಲಿ ಬಂದ ಹೊಸಬೀಜಗಳು, ಕೃಷಿಗೆ ಸಂಬಂಧಿಸಿದ ಹೊಸಹೊಸ ವಿಚಾರಗಳನ್ನು ತಿಳಿಸಿ, 'ನೀನೂ ಈಥರದಲ್ಲಿ ಪ್ರಯತ್ನಪಡು– ಹೇಗಿದ್ದರೂ ಈಗ ಅಡಿಕೆಗೆ ಒಳ್ಳೆ ಬೆಲೆಯಿದೆ....' ಎಂದೆಲ್ಲ ಹೇಳಿ ಇನ್ನಷ್ಟು ದಂಗುಬಡಿಸಿದರು. ವಾಪಸ್ಸು ಬರುವಾಗ–ಶಾಲೆಯ ಮೆಟ್ಟಿಲನ್ನೂ ಹತ್ತದ

ಈತ ಹೇಗೆ ಅಷ್ಟೆಲ್ಲ ತಿಳಿದುಕೊಂಡನೋ ಎಂದು ಸೋಜಿಗ ಪಟ್ಟುಕೊಳ್ಳುತ್ತಲೇ – 'ಆಯ್ತು ಭಾವಯ್ಯ ನೀನು ಹೇಳಿದಹಾಗೆ ಈ ಸಲದ ಫಸಲು ತೆಗೆಯುವೆ–' ಅಂದಿದ್ದ.

ಇವರು ವಾಪಸ್ಸು ಬಂದಾದಮೇಲೂ ಮೂವರೂ ಮಾತಾಡುತ್ತ ಕುಳಿತಿದ್ದ ಕಂಡು ಕೃಷ್ಣಸ್ವಾಮಿ.... 'ಏಳಿ ಹೊತ್ತು ಹೋಗ್ತಿದೆ – ನಾಳೆಸಂಜೆ ಮತ್ತೆ ಪ್ರಯಾಣ ಇದೆ ನೆನಪಿದೆ ಅಲ್ಲಾ. ನಡೀರಿ ಮಲಗಿ....' ಅವಸರಿಸಿದರು. ಮೂವರು ಸೀರೆ ಪದರಿಕೊಳ್ಳುತ್ತ ಎದ್ದರು. ಸುಭದ್ರೆ ಕಂಬಳಿ ಹಾಸಿ ಮಕ್ಕಳನ್ನು ಎತ್ತಿತಂದು ಮಲಗಿಸಿ–ಹೊದಿಸಿದಳು. ಮಕ್ಕಳ ಪಕ್ಕದಲ್ಲಿಯೇ ಗೋದಾವರಿಬಾಯಿ ಗುಡಾರಹಾಸಿ ಮಲಗಿಕೊಂಡರು. ಸುಭದ್ರೆ–ಕೃಷ್ಣಸ್ವಾಮಿ ಎಲ್ಲಿ ಮಲಗುವುದು ಎಂದು ಯೋಚಿಸುತ್ತಿರುವಾಗಲೇ ಸೋಗೆಮಾಡಿನಿಂದ ಹೊರ ಬಂದ ಸುರೇಂದ್ರ – 'ನೀವು ಸೋಗೆಮಾಡಲ್ಲೇ ಮಲಗಿ ಹಾಸಿಗೆ ಹಾಸಿದ್ದೇನೆ' –ಎಂದ. ಅವನ ಮುಖದಲ್ಲಿ ತುಂಟನಗುವಿದ್ದಂತೆ ಕೃಷ್ಣಸ್ವಾಮಿಗೆ ಭಾಸವಾಯಿತು. ಅಲ್ಲಿಗೂ ಸುಮ್ಮನಾಗದೆ ಭಾಗೀರಥಿ – 'ಹೌದು ಅಣ್ಣಯ್ಯ ಹಳ್ಳಿಯಲ್ಲಂತೂ ಮಕ್ಕಳು ಮರೀಂತ ಮೂರೊತ್ತು ಅವರನ್ನು ನೋಡಿಕೊಳ್ಳೋದು ಆಯ್ತು. ಇವತ್ತಾದ್ರು ಹಾಯಾಗಿ ನಿದ್ದೆ ಮಾಡಿ....' ಎನ್ನಬೇಕೆ. ಕೃಷ್ಣಸ್ವಾಮಿಗೆ ತುಂಬ ಮುಜುಗರವಾದರೂ ಈವರೆಗೆ ಇಲ್ಲದ ಆಲೋಚನೆಯೊಂದು ಸುಳಿದು ಹೋಯಿತು !

o o o

ಆಯಾಸದಿಂದಾಗಿ ಬೆಳಿಗ್ಗೆ ಎಲ್ಲರೂ ಎದ್ದುದ್ದು ಸ್ವಲ್ಪ ತಡವಾಗಿಯೇ. ಎಲ್ಲರಿಗಿಂತ ಮೊದಲೇ ಎದ್ದು ಏನೂ ಮಾಡಲು ತೋಚದೆ ಗೋದಾವರಿಬಾಯಿ ಸುಮ್ಮನೆ ಗುಡಾರದಮೇಲೆ ದಾಸರಪದ ಗುನುಗುತ್ತ ಕೂತಿದ್ದರು. ಅತ್ತೆ ದಾಸರಪದ ಹೇಳುತ್ತಿದ್ದಾರೆಂದರೆ ಆಗಲೇ ಹೊತ್ತು ಮೀರಿರಬೇಕೆಂದು ಅದಾಗ ಎದ್ದ ಸುಭದ್ರೆ ನಾಚಿಕೆಯಲ್ಲಿ ತುರುಬು ಕಟ್ಟಿಕೊಳ್ಳುತ್ತ ಬಚ್ಚಲಿಗೆ ಹೊರಟಳು. ರಾತ್ರಿಯೆಲ್ಲ ಭಾವನಿಗೆ ಗೇಲಿಮಾಡಿದ ಸುರೇಂದ್ರನೂ ಎದ್ದದ್ದು ತಡವಾದ್ದರಿಂದ ಎದ್ದದ್ದೇ ಬಚ್ಚಲು ಹಂಡೆಗೆ ಉರಿಹಾಕುವ ನೆಪದಲ್ಲಿ ಒಳಸೇರಿ ಹೊಗೆಯೆಬ್ಬಿ

ಸುತ್ತ ಕೂತ. ಭಾಗೀರಥಿ ಕೈಯಲ್ಲಿ ಹಾಲಿನ ತಂಬಿಗೆ ಹಿಡಿದು ಕೆಚ್ಚಲು ಹುಡು ಕಲು ನಿದ್ದೆಗಣ್ಣಲ್ಲಿ ಹಿತ್ತಲಿಗೆ ನಡೆದಳು. ಗೋದಾವರಿಗೆ ಇವರೆಲ್ಲರ ಚಟುವಟಿಕೆ ಗಮನಿಸುತ್ತ ಯಾಕೋ ಮನಸ್ಸು ತುಂಬಿಬಂತು. 'ನಾರಾಯಣನೂ ಇವ ರೊಟ್ಟಿಗಿದ್ದು ನಗುತ್ತ ಇವರಂತೆಯೇ ಸಂಸಾರ ನಡೆಸಿದ್ದರೆ....' ಅನಿಸಿ ನಿಟ್ಟು ಸಿರು ಹೊರಬಂತು. ಹೂ ಮಸುಕು ತುಂಬಿದ ಕಣ್ಣಲ್ಲಿ ಮಗನ ನೆನಪು ಹನಿ ಯನ್ನು ತುಂಬಿಸಿತು. ತಮ್ಮ ಕೈಯನ್ನು ಜಮಖಾನೆಯಮೇಲೆ ಸಾರಿಸುತ್ತ ಮಕ್ಕಳ ತಲೆಹುಡುಕಿ ಸವರುತ್ತ ಅವರು ಮನಸ್ಸನ್ನು ತಹಬಂದಿಗೆ ತಂದು ಕೊಂಡರು. ಈಗ ಮುಚ್ಚಿದ ಮಂಜುಕರಗಿ ಬೆಳ್ಳನೆ ಬೆಳಕು ಮೆಲ್ಲಮೆಲ್ಲಗೆ ಬರತೊಡಗಿ ಗೋದಾವರಿಬಾಯಿ ಕೂತಲ್ಲೇ : 'ಕೃಷ್ಣಾ, ಕಂದಾ' ಅಂದರು.

ಅಂದು ಸಂಜೆಯೇ ಸೀತಾನದಿಯಿಂದ ಶಿವಮೊಗ್ಗೆಗೆ ಆಮೇಲೆ ಶೃಂಗೇರಿಗೆ ಹೋಗಬೇಕಿದ್ದರಿಂದ ಎಲ್ಲರೂ ಗಡಿಬಿಡಿಯಲ್ಲಿ ತಯಾರಾಗಲು ಹವಣಿಸಿದರು. ಮೈಮೇಲೆ ನೀರು ಹುಯ್ದುಕೊಂಡು ಆಹ್ನಿಕ ಮುಗಿಸಿದರು. ಶಾರದೆ, ಶ್ರೀನಿವಾಸ, ನರಸಿಂಹರಿಗೆ ಅತ್ತೆಯ ಮಗ ಗೋವಿಂದನೊಬ್ಬ ಅವರ ಆಟಕ್ಕೆ ಸೇರ್ಪಡೆಯಾಗಿದ್ದರಿಂದ ನಾಲ್ಕು ಮಕ್ಕಳು ಒಟ್ಟೊಟ್ಟಿಗೆ ಹೆಗಲ ಮೇಲೆ ಕೈ ಹಾಕಿ ಅಂಗಳ–ಹಿತ್ತಲು–ಮನೆಯ ಮುಂದಿನ ಕಾಡು ಎಂದೆಲ್ಲ ಕಿಸಕ್ ಅಂತ ಕಿಸೆಯುತ್ತ ಸುತ್ತಿದವು. ಗೋದಾವರಿಬಾಯಿ ಈಗ ದೊಡ್ಡವರನ್ನು ಬಿಟ್ಟು ತಾವೂ ಚಿಕ್ಕ ಮಗುವಾಗಿ ಮಕ್ಕಳೊಂದಿಗೆ 'ನನ್ನೂ ಆಟಕ್ಕೆ ಸೇರಿಸ್ಕಳ್ರೋ' ಎಂದು ಪುಟುಪುಟು ಓಡುವ ಅವರ ಹಿಂದೆ ನಡೆದಾಡಿದರು. ತಪ್ಪಿಸಿಕೊಂಡು ಹೋಗುತ್ತಿದ್ದ ಅವನ್ನು ಎಳೆದುತಂದು ಜುಲುಮೆರಾಮರಾಮಾ ಅಂತ ಸ್ನಾನ ಮಾಡಿಸಿದರು.

ಮಧ್ಯಾಹ್ನದ ಊಟವಾದ ಮೇಲೆ ಹೊಸದಾಗಿ ಸೇರ್ಪಡೆಯಾದ ಭಾಗೀರಥಿಯ ಟ್ರಂಕಿನೊಂದಿಗೆ ಎತ್ತಿನಗಾಡಿ ಗಲಗಲಕ್ ಎಂದು ಕಾಡಿನ ಗಿಡ ಗಳ ನಡುವೆ ಸದ್ದು ಮಾಡುತ್ತ ತೀರ್ಥಹಳ್ಳಿ ತಲುಪಿತು. ಅಲ್ಲಿಂದ ದಕ್ಷಿಣ ಕನ್ನಡಾದ ಕೊಂಕಣಿಗಳ 'ಶೃಂಗೇರಿ ಪಟೇಲ್' ಬಸ್ಸಿನಲ್ಲಿ ಶಿವಮೊಗ್ಗೆಯ ಮೂಲಕ ಅವರೆಲ್ಲ ರಾತ್ರಿ ಸರಿಹೊತ್ತಿನಲ್ಲಿ ಶೃಂಗೇರಿಯನ್ನು ತಲುಪಿದರು. ಅಲ್ಲಿ ವಾಸ್ತವ್ಯ ಹೂಡಲು ಸುರೇಂದ್ರನ ಸಂಬಂಧಿಗಳಿದ್ದರೂ ಕೃಷ್ಣಸ್ವಾಮಿ ಬೇಡವೆಂದುಬಿಟ್ಟರು. ಮಕ್ಕಳನ್ನೆಲ್ಲ ಕರೆದುಕೊಂಡು ತಮ್ಮ ಮತಸ್ಥರು

ಕಟ್ಟಿಸಿದ ಹೊಯ್ಸಳ ಕರ್ನಾಟಕ ಛತ್ರಕ್ಕೆ ಹೋಗಿ ಅಲ್ಲೇ ಕೋಣೆಯೊಂದನ್ನು ಬಾಡಿಗೆಗೆ ತೆಗೆದರು. ಬಾಡಿಗೆಯಾದರೂ ಎಷ್ಟು– ಹದಿಮೂರು ಆಣೆ! ಅಲ್ಲಿ ಪಾರುಪತ್ಯೆ ನೋಡಿಕೊಳ್ಳುತ್ತಿದ್ದ ಬ್ರಾಹ್ಮಣನ ತಾಯಿ ಮಡಿಹೆಂಗಸೊಂದು ರಾತ್ರಿ ಸರಿಹೊತ್ತಲ್ಲಿ ಹೋದ ಇವರಿಗೆಲ್ಲ ಕರೆದು ಮೊಸರು ಅವಲಕ್ಕಿ ಕಲಸಿ ಬಾಳೆಯೆಲೆಯಲ್ಲಿ ಹಾಕಿ ಕೊಟ್ಟು ಇವರು ತಿಂದುಮುಗಿಸಿ– ಜಮಖಾನೆಗೆ ಒರಗಿ ನಿದ್ರಿಸುವವರೆಗೂ ಅವರೆದುರೇ ತುದಿಗುಂಡಿಯಲ್ಲೇ ಕುಳಿತಿತ್ತು.

ನಸುಕಿನಲ್ಲೇ ಎದ್ದು ಗುಡಿಗೆ ಹೊರಟಾಗ ಕೃಷ್ಣಸ್ವಾಮಿಗಳನ್ನು ಕರೆದು 'ಊಟಕ್ಕೆ ಮಠಕ್ಕೇನೂ ಹೋಗಬೇಡಿ, ಎಲ್ಲ ಇಲ್ಲೇ ಬಂದುಬಿಡಿ ಅಡುಗೆ ಮಾಡಿರ್ತೀನಿ....' ಎಂದು ಹೇಳಿದಳು ಬೇರೆ. ಇವರೆಲ್ಲ ಬೆಳಕಾಗುವ ವೇಳೆಗೆ ನದಿಯ ದಂಡೆಗೆ ಬಂದಾಗ ಹೊಳೆ ನೋಡಿದ್ದರೂ ಇಷ್ಟು ದೊಡ್ಡ ನದಿ ನೋಡಿರದಿದ್ದ ನರಸಿಂಹ–ಶಾರದೆಯರಿಗೆ ಖುಷಿಯೋ ಖುಷಿ. ಹಿಡಿದ ಕೈಯನ್ನು ಬಿಡಿಸಿಕೊಂಡು ನೀರಿನತ್ತ ಓಡುತ್ತಿದ್ದ ಮಕ್ಕಳನ್ನು ಹಿಡಿಯುವುದು ಎಲ್ಲರಿಗೂ ಸಾಕಾಯಿತು. ದೊಡ್ಡವರಲ್ಲಿ ಒಬ್ಬರು ಅವರನ್ನು ನೋಡಿಕೊಳ್ಳುವುದು, ಸ್ನಾನಮಾಡಿ ಅವರೆಲ್ಲ ಬಂದ ಮೇಲೆ ಮಕ್ಕಳು ಸ್ನಾನ ಮಾಡುವುದು ಎಂದು ಗೊತ್ತು ಮಾಡಿ— ಕೃಷ್ಣಸ್ವಾಮಿಗಳು ಮಕ್ಕಳನ್ನು ಹಿಡಿದುಕೊಂಡು ದಂಡೆಗೆ ಕುಳಿತರು. ತಣ್ಣಗೆ ಕೊರೆಯುತ್ತಿದ್ದ ನದಿ ನೀರಿನಲ್ಲಿ ಸುರೇಂದ್ರ, ಭಾಗೀರಥಿ, ಗೋದಾವರಿಬಾಯಿ, ಸುಭದ್ರೆ ಸ್ನಾನ ಮಾಡಬೇಕಿತ್ತು. ಗೋದಾವರಿಬಾಯಿ ದಂಡೆಗಂಟಿದಂತಿದ್ದ ಕಪ್ಪು ಬಂಡೆಗೆ ಕುಳಿತು ತಾಮ್ರದ ತಂಬಿಗೆಯಿಂದ ತಲೆಗೆ ನೀರು ಸುರುವಿಕೊಂಡರು. ಇನ್ನೂ ಸ್ವಲ್ಪ ಮುಂದೆ ಹೋಗಿ ನೀರಲ್ಲಿ ಮೂರುಸಲ ಮುಳುಗು ಹಾಕಿದರು. ಸುಭದ್ರೆ–ಭಾಗೀರಥಿ ಸಾಕಷ್ಟು ಬೆಳಕಾದ್ದರಿಂದ ಹೆಚ್ಚು ಹೊತ್ತು ನೀರಲ್ಲಿರಲು ಸಂಕೋಚವಾಗಿ ಬೇಗ ಬೇಗ ಎದ್ದು ಬಂದು ಸೀರೆ ಒದಲಿಸಿದರು. ಇಲ್ಲಿನ ಕುಣಿದಾಡುತ್ತಿದ್ದ ಮಕ್ಕಳನ್ನು ಪ್ರಯಾಸದಲ್ಲಿ ಹಿಡಿದಿಟ್ಟಿದ್ದ ಕೃಷ್ಣಸ್ವಾಮಿಗಳು ದೊಡ್ಡವರೆಲ್ಲ ದಂಡೆಗೆ ಬಂದ ಮೇಲೆ ಮಕ್ಕಳನ್ನು ಕೈಬಿಟ್ಟಿದ್ದೇ ಅವೆಲ್ಲ ಕುಪ್ಪಳಿಸಿ ನದಿಗೋಡಿದರು— ಅವರ ಹಿಂದೆ ಕೃಷ್ಣಸ್ವಾಮಿ.

ಸ್ನಾನ ಮುಗಿಸಿ ಗುಡಿಗೆ ಹೋದಾಗ ಗೋದಾವರಿಬಾಯಿ ಕೃಷ್ಣನನ್ನು ಕರೆದು ಎಲೆಪೂಜೆ ಕಟ್ಟಿಸು ಎಂದರು. ಕಂಗಿನ ಸೇವೆ ಅಲ್ಲಿನ ವಿಶೇಷತೆ,

ಶಾರದೆಗೆ ಹೂವಿನ-ಕಂಗಿನ ಪೂಜೆ ಮುಗಿಸಿ— ಗುಡಿಯ ಸುತ್ತ ಪ್ರದಕ್ಷಿಣೆ ಹಾಕಿ ಎಲ್ಲರೂ ಪ್ರಾಂಗಣದಲ್ಲಿ ಕುಳಿತರು. ಪ್ರಾಂಗಣಕ್ಕಂಟಿದಂತೆ ಬೆಳೆದಿದ್ದ ದೊಡ್ಡ ಆಲದ ಮರ- ಅದಕ್ಕೊಂದು ಕಟ್ಟೆ. ಆ ಆಲದ ತೊಂಗೆ ತೊಂಗೆಗೂ ತೂಗುವ ತೆಂಗಿನಕಾಯಿಯ ಹರಕೆ ಚೀಲಗಳು. ಹಸಿರು ಬಳೆ, ಅರಸಿಣದ ಬೇರುಗಳು. ಮನಸ್ಸಿನಲ್ಲಿ ಏನನ್ನಾದರೂ ಅಂದುಕೊಂಡು ಅಲ್ಲಿನ ತೊಂಗೆಗೆ ಕಾಯಿಜತೆ ಬಳೆ, ಅರಸಿಣಬೇರು ಕಟ್ಟಿದರೆ ಇಷ್ಟಾರ್ಥ ನೇರವೇರುವುದೆಂಬ ಪ್ರತೀತಿ. ಇವರ ಮಧ್ಯೆ ಕುಳಿತಿದ್ದ ಗೋದಾವರಿಬಾಯಿ ಕೃಷ್ಣಸ್ವಾಮಿಯ ಬಳಿ ಒಂದಿಷ್ಟು ಚಿಲ್ಲರೆ ಇಸಿದುಕೊಂಡರು. ಆ ಕಟ್ಟೆಯತ್ತ ನಡೆದುಹೋದರು. ತೆಂಗು-ಬಳೆ ತೆಗೆದುಕೊಂಡರು. ಅದನ್ನು ಕಷ್ಟಪಡುತ್ತ ಕಾಲು ಎತ್ತರಿಸಿ ತೊಂಗೆಗೆ ಕಟ್ಟಿ-ಕಣ್ಮುಚ್ಚಿ ಕೈಮುಗಿದರು. 'ನಾರಾಯಣ ವಾಪಸ್ಸು ಬರಲಿ- ಅವನು ಹೇಗಿದ್ದರೂ ಚಿಂತೆಯಿಲ್ಲ ಎದುರಿಗಿದ್ದರೆ ಸಾಕು-' ಅವರ ಮನದ ಪ್ರಾರ್ಥನೆ. ದೊಡ್ಡವರೆಲ್ಲ ದಂಗಾಗಿ ಗೋದಾವರಿಬಾಯಿಯನ್ನು ನೋಡುತ್ತಿದ್ದರೆ ಮಕ್ಕಳು ಅಜ್ಜಿಯತ್ತ ಕೈಮಾಡಿ ನಗುತ್ತಿದ್ದವು. ಕೃಷ್ಣಸ್ವಾಮಿಗೆ ಒಂದರೆಚಣ ಎದೆಯಲ್ಲಿ ನೋವಾಯಿತು. ಅರೆಗಳಿಗೆ ಕಣ್ಣವೆ ಮುಚ್ಚಿದರು.

ಹಾಗೆಯೇ ಅಲ್ಲಿನ ಕಂಬಕ್ಕೆ ಆದು ಕುಳಿತು ಮತ್ತೆ ಕಣ್ಣುಮುಚ್ಚಿದರು. ಕಣ್ಣು ತೆರೆದು ಒಮ್ಮೆ ಗರ್ಭಗುಡಿಯತ್ತ ನೋಡಿದರು : ಒಳಗೆ ಸಮಯ ಜೋಡಿ ದೀಪಗಳ ಪ್ರಖರ ಬೆಳಕು-ಅಲ್ಲಿಂದ ಒಂದು ವಿಧದ ಹಿತವಾದ-ಸುಗಂಧದ ವಾಸನೆ. ಮತ್ತೆ ಕಣ್ಮುಚ್ಚಿದರು. ಅಪ್ಪಯ್ಯ ಹೇಳುತ್ತಿದ್ದರಲ್ಲ ಎಲ್ಲ ವಿಚಾರವೂ ತಿಳಿಯಬೇಕು ಎಂದು. ಹಾಗಂದೇ ಆನಂದತೀರ್ಥರ-ಶಂಕರರ ಎರಡೂ ವೇದಾಂತದ ಪುಸ್ತಕಗಳನ್ನು ತಂದಿಟ್ಟಿದ್ದರವರು. 'ಅದ್ವೈತವಿಲ್ಲದೆ ದ್ವೈತವಿಲ್ಲ-ಹಾಗೇ ದ್ವೈತವಿಲ್ಲದೆ ಅದ್ವೈತ ಹುಟ್ಟಿತಾದರೂ ಹೇಗೋ ? ಎರಡನ್ನೂ ಓದು-ಯಾವುದು ಸರಿಯೆನಿಸುತ್ತದೋ ಅದನ್ನು ನಂಬು !' ಅಂದಿದ್ದರು. ಕೃಷ್ಣಸ್ವಾಮಿಗಳಿಗೆ ಶಂಕರರ ಜಾಗ್ರತ್, ಸ್ವಪ್ನ, ಸುಷುಪ್ತಿ ವೇದಾಂತದ ಮಾತುಗಳು ತಲೆಯಲ್ಲಿ ಸುಳಿದವು. ಬ್ರಹ್ಮ ಭಾಷ್ಯ ಸೂತ್ರದ ಶ್ಲೋಕಗಳು ನೆನಪಾದವು. ಹೀಗೆ ಕೃಷ್ಣಸ್ವಾಮಿ ತಮ್ಮ ಗುಂಗಿನಲ್ಲಿ ಮುಳುಗಿ ಹೋದಾಗ ಯಾವಾಗಲೋ ಗೋದಾವರಿಬಾಯಿ ಇವರನ್ನು ಬಂದು ಸೇರಿಕೊಂಡಿದ್ದರು. ಆದರೂ ಯಾಕೋ ಅಲ್ಲಿನ ವಾತಾವರಣದಲ್ಲಿ ಮೌನ

ಆವರಿಸಿ ವಿಚಿತ್ರ ರೀತಿಯ ವಿಷಾದ ತುಂಬಿ ಎಲ್ಲರೂ ಮಾತು ಕಳೆದುಕೊಂಡವ ರಂತೆ–ಎಲ್ಲಿಂದ ಮಾತು ಆರಂಭಿಸಬೇಕೆಂದು ಗೊತ್ತಾಗದೇ ಸುಮ್ಮನೇ ಕುಳಿತು ಬಿಟ್ಟಿದ್ದರು. ಈ ನಡುವೆ ಪ್ರಾಂಗಣದ ಸುತ್ತಮುತ್ತ ಆಡಲು ಹೋಗಿದ್ದ ಮಕ್ಕಳು ಬಂದು ಗದ್ದಲವೆಬ್ಬಿಸಿದಾಗಲೇ ಕೃಷ್ಣಸ್ವಾಮಿಗೆ ಎಚ್ಚರವಾಯಿತು. ಅವರು ನಗುತ್ತ 'ಊಟಕ್ಕೆ ಹೊತ್ತಾಗುತ್ತದೆ ಏಳಿ' ಎಂದು ಎಲ್ಲರನ್ನೂ ಎಬ್ಬಿಸಿ ಛತ್ರದತ್ತ ಹೆಜ್ಜೆ ಹಾಕುವಾಗ ಅಂದುಕೊಂಡರು– 'ಇದನ್ನೇ ಅಲ್ಲವೆ ಶಂಕರರು 'ಸ್ವಪ್ನಾವಸ್ಥೆ' 'ಭ್ರಾಂತು' ಅಂತನ್ನುವುದು....'

ಅಂದು ರಾತ್ರಿ ಹೆಂಗಸರು, ಮಕ್ಕಳು ಛತ್ರದ ಒಳಕೋಣೆಯಲ್ಲಿ ಮಡಿ ಹೆಂಗಸಿನೊಂದಿಗೆ ಮಲಗಿದರೆ ಕೃಷ್ಣಸ್ವಾಮಿ–ಸುರೇಂದ್ರ ಹೊರಗಿನ ಪೌಳಿಯ ಕಟ್ಟೆಗೆ ಮಲಗಿದರು. ಮಲಗಿದ ಎಷ್ಟೋ ಹೊತ್ತು ಬಲವಂತದಿಂದ ಕಣ್ಮು ಚ್ಚಿದರೂ ನಿದ್ರೆ ಬರದಾದಾಗ ಕೃಷ್ಣಸ್ವಾಮಿ ಎದ್ದು ಉದ್ದನೆಯ ಛತ್ರದ ಸಾಲಿ ನಲ್ಲಿ ನಡೆದಾಡಿದರು. ಶಾರದೆಯ ದರ್ಶನಕ್ಕೆಂದು ಬಂದ ಅನೇಕರು ಅಲ್ಲಲ್ಲೇ ಒರಗಿ ಮಲಗಿದ್ದರು. ಅದನ್ನೆಲ್ಲ ನೋಡುತ್ತ ಹತ್ತಾರು ಸಲ ಸುತ್ತಿದರೂ ಸಮಾಧಾನವಾಗಲಿಲ್ಲ. ಅಲ್ಲಿಂದ ನೇರ ನದಿದಂಡೆಗೆ ನಡೆದರು. ಕತ್ತಲಿನಲ್ಲಿ ನೀರು ಜುಳುಜುಳು ಸಪ್ಪಳ ಮಾಡುತ್ತ ಶಾಂತವಾಗಿ ಹರಿಯುತ್ತಿತ್ತು. ಆಕಾಶ ದಲ್ಲಿ ಅಲ್ಲಲ್ಲಿ ಮಿನುಗುವ ನಕ್ಷತ್ರಗಳನ್ನು ; ದೂರದ ಊರಿನಲ್ಲಿ ಅಲ್ಲೊಂದು ಇಲ್ಲೊಂದು ಮನೆಯಲ್ಲಿ ಬೆಳಗುವ ದೀಪಗಳನ್ನು ಬಿಟ್ಟರೆ ಇನ್ನೆಲ್ಲ ಕತ್ತಲು, ಕತ್ತಲು. ಹತ್ತಿರದ ಕಪ್ಪು ಬಂಡೆಯೊಂದರ ಮೇಲೆ ಕುಳಿತು– ಹರಿದುಹೋಗು ತ್ತಿದ್ದ ನೀರಲ್ಲಿ ಕಾಲನ್ನು ಇಳಿಬಿಟ್ಟು ಆಡಿಸುತ್ತ ಆಕಾಶವನ್ನೇ ದಿಟ್ಟಿಸ ತೊಡಗಿ ದರು. ದೃಷ್ಟಿ ಅಲ್ಲಿದ್ದರೂ ಮನಸ್ಸಿನಲ್ಲಿ ಎಲ್ಲೆಲ್ಲಿಯವೋ ಆಲೋಚನೆಗಳು. 'ಎಷ್ಟೆಲ್ಲ ಇದ್ದರೂ ಹಲವೊಮ್ಮೆ ಬೇಕಿರುವುದು ಬೇರೆ ಅಂತ ಅನಿಸುವುದು ಯಾಕಾಗಿಯೋ ? ಅಮ್ಮ ನಾವೆಲ್ಲ ಎದುರಿಗಿದ್ದು, ಯಾವುದಕ್ಕೂ ಕಡಿಮೆ ಯಾಗದಂತೆ ನೋಡಿಕೊಂಡರೂ ನಾರಾಯಣನನ್ನು ಹಂಬಲಿಸುವ ಹಾಗಾಗುವ ಸ್ಥಿತಿಗೇನು ಹೇಳುವುದು ? ಆಕೆ ಆಲದ ಬೇರಿಗೆ ಹರಕೆ ಕಟ್ಟುವ ಗಳಿಗೆಯಲ್ಲಿ ಹರಕೆ ಹಾರೈಸಿಕೊಳ್ಳುವ ಗಳಿಗೆಯಲ್ಲಿ ನಾಣಿಯ ಹೊರತಾಗಿ ಇನ್ನೆಲ್ಲ ನಗಣ್ಯ ವಾಗಿ ಕಂಡಿರಲಿಕ್ಕೂ ಸಾಕು. ಅದು ಆಕೆಯ ತಪ್ಪು ಎಂದಾದರೂ ಹೇಳು ವುದು ಹೇಗೆ ? ಅವರ ಮನಸ್ಸಿನ ಸ್ಥಿತಿ–ವೇದನೆ, ಮೂಕ ನೋವು ನಮಗೆ

ಅರ್ಥವಾಗುವುದಾದರೂ ಹೇಗೆ ? ಯಾಕೆ ಹಲವೊಮ್ಮೆ ಮನಸ್ಸಿನ ಎಲ್ಲ ಬಾಗಿಲುಗಳು ಮುಚ್ಚಿಕೊಂಡು ಬಿಡುತ್ತವೆ ? ಇದನ್ನು ಶಂಕರರು ಏನನ್ನು ತ್ತಾರೆ ? ಚಿತ್ತ, ಅರಿವು ಎಂದೇ ? ಇರಬೇಕು. ಈ ಚಿತ್‌ತತ್ವವೇ ಮನು ಷ್ಯನ ಇಂದ್ರಿಯ, ಮನಸ್ಸು, ಅಹಂಕಾರ, ಅಂತಃಕರಣಗಳಿಂದ ತುಂಬಿಕೊಂಡು ದುಃಖಿಯನ್ನಾಗಿ ಮಾಡುತ್ತದೆ, ಆದರೆ ಇದೂ ಬ್ರಹ್ಮವೇ ! ಅನ್ನುತ್ತಾರೆ. ಆದರೆ ಈ ಉಪಾಧಿಗಳಲ್ಲಿ ಮುಳುಗಿ ಹೋದ ಚಿತ್ತವನ್ನು ಮೇಲೆತ್ತಿ ನಿಷ್ಕಲ್ಮ ಷವಾದಾಗ ಅನಂತವಾದ–ಶುದ್ಧವಾದ–ಪೂರ್ಣವಾದ, ಆನಂದಮಯವಾದ 'ಬ್ರಹ್ಮ'ದ ನಿಜಸ್ವರೂಪವಾಗುತ್ತದೆ : ಅಜ್ಞಾನ ತೊರೆದಾಗಲೇ ಬ್ರಹ್ಮ ಜ್ಞಾನ ಪ್ರಾಪ್ತಿ–ಆನಂದೋ ಬ್ರಹ್ಮ : ಎನ್ನುವುದು ಶಂಕರರ ಸಿದ್ಧಾಂತ. ಎಷ್ಟೋ ತರಹದ ವಿಕಾರ, ಅಜ್ಞಾನಗಳನ್ನು ತುಂಬಿಕೊಂಡು ಜಾಗೃತಿಯಲ್ಲಿ, ಸ್ವಪ್ನಾವಸ್ಥೆಯಲ್ಲಿ,ಸಾವಂಥ ಆದರೆ ಸಾವಲ್ಲದ ಸುಷುಪ್ತಾವಸ್ಥೆಯಲ್ಲಿ ಕಾಡುವ ನಾವು ಪಡೆದಿರದ 'ಸಂಸ್ಕಾರ' : ಭ್ರಾಂತು, ಅಜ್ಞಾನದಲ್ಲಿ ಕೊಳೆಸುತ್ತದೆ. ಪೂರ್ಣಸಂಸ್ಕಾರ ಪಡೆದಾಗ ಚಿತ್‌ತತ್ವದ ಬೆಳಕು– ನಮ್ಮ ಭ್ರಾಂತಿಯಡಿಯಲ್ಲಿ ಮನೆ ಮಾಡಿ ಕತ್ತಲಾಗಿ ಕೂತಿರುವ ಅಜ್ಞಾನವನ್ನು ಹೊಡೆದೋಡಿಸಿ ಬ್ರಹ್ಮರ ನ್ನಾಗಿಸುತ್ತದೆ. ಸತ್, ಚಿತ್, ಆನಂದವನ್ನು ಪಡೆದುಕೊಂಡ ವ್ಯಕ್ತಿ ಸಚ್ಚಿದಾ ನಂದನಾಗುತ್ತಾನೆ.' ಆದರೆ ಈ ಗೊಂದಲಗಳೆಲ್ಲ ಹರವಿ ಕೂತಾಗ ಹಲ ವೊಮ್ಮೆ ಏನೂ ಅರ್ಥವಾಗುವುದಿಲ್ಲ. ತಲೆ ಸಿಡಿಯ ತೊಡಗುತ್ತದೆ. ಯಾಕೆ, ಎಲ್ಲವನ್ನೂ ಇಷ್ಟೊಂದು ಕಠಿಣ ಮಾಡಬೇಕೋ ತೋಚುವುದಿಲ್ಲ. ಗಂಡ ಹೆಂಡತಿಯನ್ನು ಹಚ್ಚಿಕೊಳ್ಳುವುದು, ತಾಯಿ ಮಗನನ್ನು ಹಂಬಲಿಸುವುದು, ಅಂತಃಕರಣಕ್ಕಾಗಿ ಪರಿತಪಿಸುವುದು ಭ್ರಾಂತಿ ಎನ್ನುವುದಾದರೆ ಈ ಬದುಕಿಗೆ ಅರ್ಥವೇನು ? ಹಾಗಾದರೆ ನಿರಂತರವಾಗಿ ನಡೆದು ಬಂದ ಜನಾಂಗಗಳೆಲ್ಲ ಯಾವ ಪುರುಷಾರ್ಥಕ್ಕೆ ? ಅಮ್ಮನ ಹಲಬುವಿಕೆಗೆ ಭ್ರಾಂತು ಎಂದು ಕರೆ ಯುವುದಾದರೂ ಹೇಗೆ ? ಹಾಗೆಂದು ಶಂಕರರಂಥ ಅನುಭವಿಗಳು ಹೇಳಿದ್ದು ಪ್ರಶ್ನಿಸುವುದು ನನ್ನಂಥ ಏನೂ ಅರಿಯದವನ ಯೋಗ್ಯತೆಯೂ ಅಲ್ಲವೇನೋ ಅನಿಸುತ್ತದೆ.

ಆದರೆ ಸಂಸಾರವನ್ನೂ ಯೋಗಕ್ಕೆ ಹೋಲಿಸುತ್ತಾರೆ. ದಾಂಪತ್ಯ ಯೋಗ ಎಂದು ತಿಳಿದವರು ಅನ್ನುತ್ತಾರೆ. ಅದರಲ್ಲಿ ಶಂಕರರ ಭಾಷ್ಯ–ಬ್ರಹ್ಮ

ಸೂತ್ರ ಓದುವಾಗಲೆಲ್ಲ ಶಂಕರರ ಬದುಕಿನ ಒಂದು ಘಟನೆ ನೆನಪಾಗುತ್ತದೆ. ಸರ್ವಸಂಗ ಪರಿತ್ಯಾಗಿಯಾಗಿ ಧರ್ಮಪ್ರಸಾರಕ್ಕೆ ಹೋಗಿದ್ದ ಶಂಕರ ಬದರಿಕಾಶ್ರಮದಲ್ಲಿದ್ದಾಗ ಆತನ ತಾಯಿ 'ಅಂಬಾ' ಸಾವನ್ನು ಕಾಯುತ್ತ ಹಾಸಿಗೆಯಲ್ಲಿ ಮಲಗಿದ್ದಾಗ ಶಂಕರನಿಗೆ ಈ ವಿಷಯ ತಿಳಿಯುತ್ತದೆ. ಶಂಕರ ಹಳ್ಳಿಗೆ ಹೋದಾಗ ಸಾವಿನ ಹೊಸ್ತಿಲಲ್ಲಿರುವ ತಾಯಿ ಇವನಿಗಾಗಿಯೇ ಕಾದಂತೆ ಇವನನ್ನು ಕಂಡದ್ದೇ–ಶಂಕರ ತಾಯಿಯನ್ನು ಸ್ಪರ್ಶಿಸಿದ್ದೇ ಅವಸಾನಿಸುತ್ತಾಳೆ. ಶಂಕರ ಆಕೆಯ ಸಂಸ್ಕಾರಮಾಡಲು ಹಂಬಲಿಸುತ್ತಾನೆ.... ಈಗಲೂ ಅರ್ಥವಾಗುತ್ತಿಲ್ಲ ಅಂಥ ಶಂಕರರಿಗೂ ಯಾಕೆ ಬಂಧನ ಸಿಕ್ಕಿಕೊಂಡಿತೋ ಎಂದು. ಆ ಥರದ ಬಂಧ, ನೋವೆಲ್ಲ ಬದುಕುವ ಮೂಲಕವೇ ಗೊತ್ತಾಗುವುದೇ ನಿಜಕ್ಕೂ ಸತ್ಯವಿರಬಹುದು.... ಅದು ಅಮ್ಮನಾದರೇನು ? ಶಂಕರರಾದರೇನು ?....

ಕತ್ತಲು ಸರಿಯುತ್ತಿತ್ತು. ಮೈಗೆ–ಮನಸ್ಸಿಗೆ ತುಂಬ ಆಯಾಸವೆನಿಸಿತು. ನಿಧಾನಕ್ಕೆ ನದಿದಂಡೆಯಿಂದ ಎದ್ದ ಕೃಷ್ಣಸ್ವಾಮಿ ಛತ್ರಕ್ಕೆ ನಡೆದರು. ಹಾಸಿಗೆಯಲ್ಲಿ ಅಡ್ಡವಾದರು. ಆಯಾಸದಿಂದ, ಒಂದುಥರದ ತಲೆಸಿಡಿತದಿಂದ ಕಣ್ತುಂಬ ನಿದ್ದೆ ತುಂಬಿಕೊಂಡು ಬಂತು. ನಿದ್ದೆಗೆ ಜಾರುವ ಮೊದಲು 'ನಾಳೆ ಬೆಳಿಗ್ಗೆ ಎದ್ದಕೂಡಲೇ ಇವತ್ತು ಅನಿಸಿದ್ದೆಲ್ಲ ಡೈರಿಯಲ್ಲಿ ಬರೆದಿಡಬೇಕು. ಮತ್ತೊಂದಾದರೂ ಓದಿಕೊಳ್ಳಬಹುದು' ಅಂದುಕೊಂಡರು.

ಶೃಂಗೇರಿಯಲ್ಲಿ ಎರಡುದಿನ ಕಳೆದವು. ಮತ್ತೆರಡು ದಿನ ಇರಬಹುದು ಎಂದುಕೊಂಡಿದ್ದರೂ ಗೋದಾವರಿಬಾಯಿಯ ಅನ್ಯಮನಸ್ಕತೆಯಿಂದಾಗಿ ಎರಡನೆಯ ದಿನದ ಮಧ್ಯಾಹ್ನವೇ ಧರ್ಮಸ್ಥಳದ ಬಸ್ಸನ್ನು ಹತ್ತಲು ಕೃಷ್ಣಸ್ವಾಮಿ ಯೋಚಿಸಿ, ಸುರೇಂದ್ರನಿಗೆ ಆ ಸಲಹೆಯನ್ನು ಕೊಟ್ಟರು. ಸುಭದ್ರೆ–ಭಾಗೀರಥಿ ವಿಷಯ ತಿಳಿದದ್ದೇ ನದಿದಂಡೆಯಲ್ಲಿ ಒಗೆದು ಹರವಿದ್ದ ಬಟ್ಟೆಗಳನ್ನೆಲ್ಲ ಬೇಗಬೇಗ ಮಡಚಿ ಛತ್ರಕ್ಕೆ ಬಂದು ಸಾಮಾನುಗಳನ್ನು ಜೋಡಿಸಿಕೊಂಡರು. ಕೃಷ್ಣಸ್ವಾಮಿ ಹೊರಡುವ ಮೊದಲು ಛತ್ರದ ಆಚಾರ್ಯರಿಗೆ ಹತ್ತುರೂಪಾಯಿ ; ಮಡಿಹೆಂಗಸಿಗೆ ಐದುರೂಪಾಯಿ ಸಂಭಾವನೆ ಕೊಟ್ಟರು. ಮುದುಕಿ – 'ಮುಂದಿನ ಸಲ ಪಿತೃಪಕ್ಷಕ್ಕೆ ಇಲ್ಲಿಗೆ ಬನ್ನಿ – ರವೆಯುಂಡೆ – ಪತ್ರಡೆ, ಹಾಗಲಕಾಯಿ ಗೊಜ್ಜು ಗನವಾಗಿ ಮಾಡಿ ಹಾಕ್ತೆ' ಎಂದು ಬೊಚ್ಚುಬಾಯಲ್ಲಿ ನಕ್ಕಿತು.

ಮಧ್ಯಾಹ್ನದ ಬಿಸಿಲು ಇಳಿಯುವ ವೇಳೆಗೆ ಅವರಿಗೆ ಕಾನಡೀ ಬಸ್ಸು ಸಿಕ್ಕಿತು. ಟ್ರಂಕು-ಹಾಸಿಗೆಯನ್ನು ಬಸ್ಸಿನಮೇಲೆ ಹಾಕಿ ; ಇಬ್ಬರು ಕೂಡುವ ಸೀಟಿನಲ್ಲಿ ನಾಲ್ವರು ಕೂತು ಈ ಘಟ್ಟಬಿಟ್ಟು, ಆ ಘಟ್ಟದಕಡೆಗೆ ಸಾಗುತ್ತಿರುವ ಬಸ್ಸು ಶೃಂಗೇರಿಯ ಗಡಿದಾಟಿತು. ನಾಲ್ಕೂ ಮಕ್ಕಳು ತಮಗೇ ಕಿಟಕಿಪಕ್ಕ ಜಾಗಬೇಕೆಂದು ರಂಪಾಟಮಾಡಿ-ಕಡೆಗೆ ಒಬ್ಬೊಬ್ಬರಿಗೆ ಸ್ವಲ್ಪ ಸ್ವಲ್ಪ ಹೊತ್ತು ಎಂದು ಹೇಳಿದ ಮೇಲೆ ಸುಮ್ಮನಾದವು. ದೂರದಿಂದಲೇ ಕಿಟಕಿ ಹೊರಗಿನ ಕಾಡನ್ನು ನೋಡುತ್ತ ತೂಕಡಿಸುತ್ತ ನಿದ್ದೆಮಾಡಿಬಿಟ್ಟಿದ್ದವು. ಯಾವ ಯೋಚನೆಯೂ ಇಲ್ಲದೆ ಶೃಂಗೇರಿಯಲ್ಲಿ ಎರಡುದಿನ – ಧರ್ಮಸ್ಥಳದಲ್ಲಿ ಎರಡುದಿನ ಕಳೆದವರೆಂದರೆ – ಆ ನಾಲ್ಕು ಮಕ್ಕಳೇ !

ಧರ್ಮಸ್ಥಳದಿಂದ ತೀರ್ಥಹಳ್ಳಿಗೆ ಬಂದು ವಾರಕಾಲ ಇದ್ದುಹೋಗಿರೆಂದು ಭಾಗೀರಥಿ-ಸುರೇಂದ್ರ ಎಷ್ಟೇ ಒತ್ತಾಯಿಸಿದರೂ ಕೃಷ್ಣಸ್ವಾಮಿ ಗೋದಾವರಿ ಬಾಯಿ ಯಾಕೋ ಸರಿಯಾದ ಮನಸ್ಥಿತಿಯಲ್ಲಿಲ್ಲದಿದ್ದುದರಿಂದ ಬೇಡವೆಂದಿದ್ದರು. ಅಲ್ಲದೆ ಧರ್ಮಸ್ಥಳದಿಂದ ಹಾಸನದವರೆಗೆ ನೇರ ಬಸ್ಸಿರುವುದರಿಂದ ಅನವಶ್ಯಕವಾಗಿ ಶ್ರಮವೇಕೆ ಎನ್ನುವುದು ಅವರ ಅಭಿಪ್ರಾಯವಾಗಿತ್ತು. ಇತ್ತ ಇವರು ಶಿವಮೊಗ್ಗೆಯ ಬಸ್ಸು ಹತ್ತಿದರೆ, ಅತ್ತ ಕೃಷ್ಣಸ್ವಾಮಿ ತಮ್ಮ ಮಕ್ಕಳು-ಹೆಂಡತಿ, ತಾಯಿಯೊಂದಿಗೆ ಹಾಸನದ ಬಸ್ಸು ಹತ್ತಿದ್ದರು. ಹೋಗುವಾಗ ಮಕ್ಕಳು-ಮಕ್ಕಳು, ಸೊಸೆ-ಮಗಳು-ಅತ್ತೆ-ಭಾವ-ಭಾವಮೈದುನ ಗುಂಪು ಗುಂಪಾಗಿ ಬೆರೆತು ಮಾತಾಡಿದರು. ಬೇಸಿಗೆ ರಜೆದಲ್ಲಿ ಬರುತ್ತೇವೆಂದು ಗೋವಿಂದನಿಗೆ ಶಾರದೆ-ನರಸಿಂಹ ಆಶ್ವಾಸನೆ ಕೊಟ್ಟಿದ್ದರೆ – ಸುಭದ್ರೆ, ಸುರೇಂದ್ರ-ಭಾಗೀರಥಿಯರಿಗೆ ಹಳ್ಳಿಗೆಬರುವಂತೆ ಹೇಳಿದಾಗ-'ನೀನು ಮಾವಿನ ಕಾಯಿ ತಿನ್ನುಹಂಗೆ ಆಗ್ಲೀ ಆಗ ಬರ್ತೇವೆ' ಎಂದು ಹೇಳಿ ನಾಚುವಂತೆ ಮಾಡಿದ್ದರು. ಗೋದಾವರಿಬಾಯಿ ಅಲ್ಲಿಯವರೆಗೂ ಯಾಕೋ ಮಾತುಮರೆತಂತಿದ್ದವರು ಮಗಳನ್ನು – ಅಳಿಯನನ್ನು ಬೀಳ್ಕೊಡುವ ಮೊದಲು ಭಾವುಕರಾಗಿ ಎಂದಿನಂತೆ ಹತ್ತತ್ತು ಸಲ 'ಹುಷಾರು' ಅಂದು, 'ಟಪಾಲಿನ ಮೂಲಕವಾದ್ರೂ ಸಂಬಂಧಉಳಿಸಿಕೊಳ್ಳಿ ನನ್ನವೂ ಕಡೆದಿನಗಳು, ಇರುವವರಾದರೂ ಕಡೇವರ್ಗೂ ಅನ್ಯೋನ್ಯವಾಗಿರೋಣ....' ಎಂದೆಲ್ಲ ಮಾತಾಡಿ ಹಿರಿಯರೆಲ್ಲರಿಗೂ ಭಯ-ಆರ್ದ್ರತೆ ಒಟ್ಟೊಟ್ಟಿಗೆ ಆವರಿಸುವಂತೆ ಮಾಡಿದ್ದರು.

ಧರ್ಮಸ್ಥಳದ ಬಸ್ಸು ಹಾಸನದತ್ತ ನಡೆದಾಗ ಇವರೆಲ್ಲರ ಯಾತ್ರೆ ಮುಗಿದು, ಅವರ ಮನಸ್ಸುಗಳೆಲ್ಲ ಮತ್ತೆ ನಾಳೆಯಿಂದ ಪ್ರಾರಂಭವಾಗಲಿದ್ದ ಹಳ್ಳಿಯ ಬದುಕನ್ನು ನೆನೆಸಿಕೊಳ್ಳತೊಡಗಿದವು....

## ಹರಿದು ಬಂತು ಬೆಳದಿಂಗಳು

ಯಾತ್ರೆಯಿಂದ ಬಂದ ಮೇಲೆ ಎಲ್ಲರ ಮನಸ್ಸುಗಳೂ ಹಳ್ಳಿಗೆ ಹೊಂದಿಕೊಳ್ಳಬೇಕಾದರೆ ಒಂದೆರಡು ದಿನ ಹಿಡಿಯಿತು. ಮಕ್ಕಳು ಹಳೆಯ ನೆನಪಿನಲ್ಲಿದ್ದವು. ಮಾತು ಮಾತಿನ ನಡುವೆ ಅಲ್ಲಿನದ್ದನ್ನೆಲ್ಲ ನೆನಪಿಸಿಕೊಂಡು ನಗುವವು. ಅವಕ್ಕೆ ಯಾತ್ರೆಗೆ ಕರೆದೊಯ್ಯುವಾಗ ಶಾಲೆಗೆ ರಜಾ ಇರದಿದ್ದರೂ, ವಾರದ ಮಟ್ಟಿಗೆ ಶಾಲೆಯಲ್ಲಿ ಹೇಳಿ ಕರೆದುಕೊಂಡು ಹೋಗಿದ್ದರೂ ಬಂದಾದ ಮೇಲೆ ಸಾಲೆಗೆ ಒಗ್ಗಿಕೊಳ್ಳಲು ಹಟಮಾಡಿ ಆಮೇಲೆ ಸರಿಹೋದವು. ಸುಭದ್ರೆ ವಾರಕಾಲ ಯಾರೂ ಇರದಿದ್ದ ಮನೆಯನ್ನೆಲ್ಲ ಚೊಕ್ಕಟವಾಗಿ ಸಾರಿಸಿ, ಸಗಣಿ ನೀರು ಚಿಮುಕಿಸಿ, ಹಿತ್ತಲು–ಮನೆಯ ಮೂಲೆ ಮೂಲೆಯನ್ನೆಲ್ಲ ಸ್ವಚ್ಛ ಮಾಡಲು ನಿಗಾವಹಿಸಿದಳು. ಗೋದಾವರಿಬಾಯಿ ಸುಮ್ಮನೆ ಕುಳಿತರೆ ಕ್ಷೋಬೆಗೊಂಡ ಮನಸ್ಸು ಇನ್ನಷ್ಟು ಮುದುರಬಹುದೆಂದು ಸೊಸೆಯ ಮನೆಗೆಲಸಗಳಲ್ಲಿ ಪಾಲ್ಗೊಳ್ಳಲು ನೋಡಿದರು. ಅಟ್ಟದಲ್ಲಿದ್ದ ಸಾಮಾನು–ದನದ ಕೊಟ್ಟಗೆಯನ್ನೆಲ್ಲ ತಾವೇ ನಿಂತು ಓರಣ ಮಾಡಿದರು.

ಎಲ್ಲರೂ ಅವರವರ ಬದುಕಿಗೆ ಹೊಂದಿಕೊಳ್ಳಲು ಹವಣಿಸುವ ಈ ಕಾಲದಲ್ಲಿ ಕೃಷ್ಣಸ್ವಾಮಿಗಳದು ವಿಚಿತ್ರ ಮನಸ್ಥಿತಿಯಾಗಿತ್ತು. ಅಮ್ಮಳ ಮಾಸಿಕಕ್ಕೆ ಏನು ಮಾಡಬೇಕೆಂಬ ತೊಳಲಾಟ ಒಂದೆಡೆಯಾದರೆ– ಇನ್ನೊಂದೆಡೆ ಮನಸ್ಸೇಕೊ ಅರಸೀಕೆರೆಗೆ ಹೋಗಲು ತವಕಿಸುತ್ತಿತ್ತು. ಯಾತ್ರೆಯಲ್ಲೂ ಒಂದೊಮ್ಮೆ ಅರಸೀಕೆರೆಯ ನೆನಹು ಸುಳಿದು ಹೋಗಿತ್ತು ಅವರಿಗೆ. ಹಾಗೆ

ಅವರ ಆಸೆ ನೆರವೇರಲು ಅವರಿನ್ನೂ ಒಂದು ವಾರ ಕಾಯಬೇಕಿತ್ತು. ಅಂದರೆ– ಹೊಲದ ಅವರೆ ಕೈಗೆ ಬಂದು ಕಾಳು ಮಾರಲು ಅವರು ಅರಸೀ ಕೆರೆಗೆ ಹೋಗಬಹುದಿತ್ತು. ಆ ಮೊದಲು ಅವರು ಅವಶ್ಯವಾಗಿ ಮಾಡ ಬೇಕಿದ್ದ ಕೆಲಸಗಳು ಒಂದೆರಡಿದ್ದವು– ತೆಂಗು ಬೆಳೆಗಾರರ ಸಭೆಯನ್ನು ಮತ್ತೊಮ್ಮೆ ಕೂಡಿಸಬೇಕಿದ್ದುದ್ದರಿಂದ ತಿಪಟೂರಿಗೆ ತುರ್ತಾಗಿ ಹೋಗ ಬೇಕಿತ್ತು. ಇನ್ನೊಂದು ಹಳ್ಳಿಯಲ್ಲಿ ಬಹಳ ದಿನದಿಂದ ಬಾಕಿವುಳಿದಿದ್ದ ಜಮೀನು ಸರ್ವೇಯನ್ನು ಕಾಳು ಕೈಗೆ ಬರುವ ಮೊದಲು ಮಾಡಿಮುಗಿಸಿ ಬಿಡುವು ಮಾಡಿಕೊಳ್ಳಬೇಕಿತ್ತು. ಇನ್ನೊಮ್ಮೆ ತೋಟಕ್ಕೆ ಹೋಗಿ ತೆಂಗನ್ನು ಯಾವಾಗ ಕೆಡವಬಹುದೆಂದು ಅಂದಾಜಿಸಬೇಕಿತ್ತು. ಅವರ‍್ಯಾವತ್ತೂ ಸುಮ್ಮನೆ ಕೂಡುವ ಪೈಕಿಯಲ್ಲವಾದ್ದರಿಂದ ಬಂದದಿನ, ಅದರ ಮಾರನೆ ದಿನ ತೋಟ ವನ್ನು ಪೂರ್ತಿ ನಿಗಾವಹಿಸಿ ಆ ಕೆಲಸವನ್ನು ಪೂರ್ಣಗೊಳಿಸಿದ್ದರು. ಒಂದು ದಿನ ನಸುಕಿಗೇ ಎದ್ದು ಕಾಡುದಾರಿಯಲ್ಲಿ ನಡೆದು ಹೋಗಿ ಹಳ್ಳಿಯ ಜಮೀನು ಸರ್ವೇಯನ್ನೂ ಮುಗಿಸಿಕೊಂಡು ಬಂದಿದ್ದರು. ಹೋಗುವ ದಿನವನ್ನು ತುಸು ಮುಂದಕ್ಕೆ ಹಾಕಿದ್ದರೂ, ಅಲ್ಲಿನ ತೆಂಗು ಬೆಳೆಗಾರರಿಗೆ ತಿಳಿಸಬೇಕಾದ ವಿಚಾರ ವನ್ನು ಬೇರೆಯೊಬ್ಬರ ಮುಖಾಂತರ ತಲುಪಿಸಿದ್ದರು.

ಅವರೆಕಾಳನ್ನು ಬಿಡಿಸುವ ಎರಡೂ ದಿನಗಳ ಕಾಲ ಕೃಷ್ಣಸ್ವಾಮಿ ಯೊಂದಿಗೆ ಗೋದಾವರಿಬಾಯಿಯೂ ಹೊಲಕ್ಕೆ ಅವರೊಂದಿಗೆ ಬೆಳಗುಜಾವ ದಲ್ಲೇ ಹೊರಟುಬಿಡುತ್ತಿದ್ದರು. ಮಕ್ಕಳು ಸಹ ತಮ್ಮ ಅಮ್ಮಳೊಂದಿಗೆ ಮಧ್ಯಾಹ್ನ ಜಿಗಿಯುತ್ತ ಹೊಲ ನೋಡಲು ಹೋಗುತ್ತಿದ್ದವು. ಆಳುಗಳು ಎರಡೂ ಕೈಗಳಿಂದ ಕಚಕಚ ಕತ್ತರಿಸುವುದನ್ನು, ಕತ್ತರಿಸಿದ ಅವರೆಯನ್ನೆಲ್ಲ ಒಟ್ಟೆ ಹಾಕುವ ಹೆಣ್ಣಾಳುಗಳನ್ನು ಹಾಗೆ ಒಟ್ಟೆ ಹಾಕಿದ್ದನ್ನು ಮತ್ತೆ ಚೀಲಕ್ಕೆ ತುಂಬುವ ಗಂಡಾಳುಗಳನ್ನು ಕುತೂಹಲದಿಂದ ನೋಡಿದವು. ಅವಕ್ಕೆ ಏನೋ ಹೇಳಲಾರದ ಆನಂದ. ಚೀಲಕ್ಕೆ ತುಂಬಿದ ಅವರೆಯನ್ನೆಲ್ಲಿ ಎತ್ತಿನಗಾಡಿಗೆ ತುಂಬುವಾಗ ಆಳುಗಳ ಹಿಂದೆ ಹಿಂದೆ ಬಂಡಿಯವರೆಗೆ ಹೋಗಿಬರುವಲ್ಲಿ ಅವ ಕ್ಕೇನೋ ಖುಷಿ. ಅಷ್ಟೂ ಗಿಡಗಳಿಂದ ಅವರೆಯನ್ನೆಲ್ಲ ಕೀಳಿಸಿ, ಮನೆಯ ಜಗುಲಿಗೆ ಚೀಲಗಳನ್ನು ತಂದು ಒಟ್ಟಲು ಮೂರು ದಿನ ಹಿಡಿದವು. ಒಟ್ಟು ಇಪ್ಪತ್ತು ಚೀಲಗಳಷ್ಟು ಕಾಳುಬಂದದ್ದು ಆಳುಗಳಿಗೆ ಮೊದಲಾಗಿ ಎಲ್ಲರಿಗೂ

ಆಶ್ಚರ್ಯ.... ಖುಷಿ ತರಿಸಿದ್ದವು. ಇಷ್ಟೊಂದು ಕಡಿಮೆ ಎಕರೆಯಲ್ಲಿ ಇಪ್ಪತ್ತು ಚೀಲ ಬಂದದ್ದು ಅದೃಷ್ಟವೇ ಸೈ ಎಂದು ಆಳುಗಳು ಮಾತಾಡಿಕೊಂಡರೆ ಕೃಷ್ಣ ಸ್ವಾಮಿಗಳು ಇದೆಲ್ಲ ತಮ್ಮ, ಕಾಡಜ್ಜನ, ದನಿಯನ ಶ್ರಮದ ಫಲ, ತಾವು ಆಧುನಿಕ ಬೇಸಾಯ ಪದ್ಧತಿ ಅನುಸರಿಸಿದ್ದು ಅದಕ್ಕೆ ಕಾರಣವೆಂದು ಅಂದು ಕೊಳ್ಳುವರು. ಕಾಳನ್ನು ಒಳ್ಳೆ ಬೆಲೆಯಿರುವಾಗಲೇ ಮಾರಬೇಕೆಂದು ಎರಡು ಗಾಡಿ ಗೊತ್ತು ಮಾಡಿ ಮರುದಿನವೇ ಚೀಲಗಳನ್ನೆಲ್ಲ ತುಂಬಿಕೊಂಡು ಅರಸೀ ಕೆರೆಗೆ ಹೊರಟರು. ಅವರ ಅದೃಷ್ಟವೋ ಎನ್ನುವಂತೆ ಕಾಳಿನ ಬೆಲೆ ಎರಡು ಪಟ್ಟಾಗಿತ್ತು. ತೆಗೆದುಕೊಂಡು ಹೋದ ತಕ್ಷಣ ಬಿಕರಿಯಾದ್ದರಿಂದ ಅಲ್ಲೇನೂ ಇರುವ ಅವಶ್ಯಕತೆ ಇರದಿದ್ದರೂ ಒಂದು ದಿನ ಅರಸೀಕೆರೆಯಲ್ಲಿ ಇದ್ದು ಹೋದರೆ ಹೇಗೆ ಎನ್ನುವ ಯೋಚನೆ ಒಂದುದರಿಂದ ಕೃಷ್ಣಸ್ವಾಮಿಗಳು ಆ ದಿನ ಅಲ್ಲೇ ಉಳಿದುಬಿಡಲು ನಿರ್ಧರಿಸಿದರು. ಸಂತೇಪೇಟೆಗೆ ಹೋಗಿ ಮಕ್ಕಳಿ ಗೆಂದು ಬಟ್ಟೆ ಬರೆ, ಹೆಂಗಸರಿಗೆ ಸೀರೆ ಕೊಂಡರು. ಸಿಹಿತಿಂಡಿ ಕೊಂಡರೆ ಹೇಗೆ ಎಂಬ ಆಲೋಚನೆ ಬಂತಾದರೂ– ಬಾಯಲ್ಲಿ ಬರುವ ಮೊದಲೇ ಗೋದಾವರಿ ಬಾಯಿ, ಸುಭದ್ರೆ, ರಾಶಿ ತರಹೇವಾರಿ, ಬಯಲುಸೀಮೆಯದು– ಮಲೆನಾಡಿ ನದು ಎಂದು ತಿಂಡಿಗಳನ್ನು ಮಾಡಿಡುತ್ತಿದ್ದರಿಂದ ಬೇಡವೆಂದು ಸುಮ್ಮ ನಾದರು.

ಇಷ್ಟರಲ್ಲಿ ಮಧ್ಯಾಹ್ನದ ಬಿಸಿಲಿನ ಧಗೆ ಏರತೊಡಗಿದ್ದರಿಂದ ಸುಸ್ತಾಗ ತೊಡಗಿ ತಾವು ಮಾಮೂಲಿಯಾಗಿ ಉಳಿದುಕೊಳ್ಳುತ್ತಿದ್ದ ಜಾಗಕ್ಕೆ ಹೊರಟು ಅಂದು ಅಲ್ಲೇ ಕಳೆದರು.

o o o

ನಂತರದ ತಿಂಗಳುಗಳಲ್ಲಿ ಅವರೆಗಿಡಗಳನ್ನು ಸವರಿಸಿ ಮಣ್ಣನ್ನು ಹದ ಮಾಡಿದ್ದಾದ ಮೇಲೆ ಬೇರೆ ಯಾವ ಹೊಸ ಬೆಳೆ ತೆಗೆಯಬಹುದೆಂದು ಯೋಚಿಸಿ ಕೃಷ್ಣಸ್ವಾಮಿ ಕಡೆಗೊಂದು ನಿರ್ಧಾರಕ್ಕೆ ಬಂದಿದ್ದರು. ಇತ್ತೀಚೆ ಅಕ್ಕಪಕ್ಕದ ಜಿಲ್ಲೆಗಳಲ್ಲಿ ಒಕ್ಕಲು ಜನ ಹತ್ತಿ ಬೆಳೆಯಲು ಯತ್ನಿಸುತ್ತಿದ್ದರು. ಅದು ಸ್ವಲ್ಪ ಪೇಚಿನ ಬೆಳೆ, ಕೈಕೊಟ್ಟರೂ ಕೊಟ್ಟೀತು, ನಂಬುವ ಹಾಗಿಲ್ಲ ವೆಂಬ ಕಾರಣಕ್ಕೆ ಈ ಸುತ್ತಮುತ್ತಲಿನವರಾರೂ ಅದರ ಸಹವಾಸಕ್ಕೆ ಹೋಗಿರ

ಲಿಲ್ಲ. ಸುಮ್ಮನೆ ಕೈಸುಟ್ಟುಕೊಳ್ಳಲು ಯಾವ ಬೇಸಾಯಗಾರ ತಾನೇ ಬಯಸಿಯಾನು ? ಅನೇಕ ಬಾರಿ ತಾವೂ ಯಾಕೆ ಒಮ್ಮೆ ಯತ್ನಿಸಬಾರದು ಎಂದು ಅನಿಸಿದಾಗಲೆಲ್ಲ 'ಬೆಳೆನ ಕಣ್ಣಲ್ಲಿ ಎಣ್ಣೆ ಹಾಕ್ಕಂಡು ಕಾಯ್ಬೇಕು, ತುಸು ಕಣ್ತಪ್ಪಿದರೂ ಹಿಂಜಕು ಹತ್ತಿ ಸಿಕ್ಕೊಲ್ಲ ಹುಳುಗಳ ಪಾಲಾಗುತ್ತೆ' ಅಂತೆಲ್ಲ ಬಲ್ಲವರು ಹೇಳಿದ್ದರು. ಏನೇ ಆಗಲಿ ಒಳ್ಳೆಯ ಜಾತಿ ಬೀಜ ತಂದು, ಉತ್ತು, ಆರೈಕೆ ಮಾಡಿದರೆ ಫಸಲು ನೆಟ್ಟಗೆ ಬರದೆ ಎಲ್ಲಿ ಹೋದಾತು ? ಅದೂ ಅಲ್ದೇ ಮೈಸೂರು-ಹಾಸನಗಳಲ್ಲಿ ಹತ್ತಿ ಮಿಲ್ಲುಗಳು ಬೇರೆ ಪ್ರಾರಂಭವಾಗಿರುದುರಿಂದ ಒಳ್ಳೆ ಬೆಳೆ ತೆಗೆದ್ರೆ ಬೆಲೆಗಂತೂ ಮೋಸವಾಗುಲ್ಲ ಅಂತನಿಸಿದ್ದೇ ಬೀಜ-ಗೊಬ್ಬರ ತರಲು ಮೈಸೂರಿನ ಬಸ್ಸು ಹತ್ತಿದ್ದರು. ಅಲ್ಲಿ ಹೋಗಿ ವಿಚಾರಿಸಿದ್ದಾದ ಮೇಲೆ ನಿರ್ಧಾರ ಇನ್ನೂ ಗಟ್ಟಿಯಾಗಿತ್ತು. ಅಲ್ಲಿಂದ ಬೀಜ-ಗೊಬ್ಬರ ತರುವಾಗ ಹತ್ತಿಯ ಬಗ್ಗೆ ಚೆನ್ನಾಗಿ ತಿಳಿದ ಆಳೊಬ್ಬನಿಗೆ ನೂರು ರೂಪಾಯಿ ಮುಂಗಡ ಕೊಟ್ಟು ತಿಂಗಳ ಮಟ್ಟಿಗೆಂದು ಮೈಸೂರಿನಿಂದ ಕರೆತಂದಿದ್ದರು.

ಕೆಲವರು ಸ್ವಾಮೇರಿಗೆ ಹುಚ್ಚು ಹಿಡಿದಿದೆ ಅಂದರು. ಇನ್ನಷ್ಟು ಜನ ಏನೇ ಹುಚ್ಚಾದ್ರೂ ಅಂಥ ಬೆಳೆಗೆ ಕೈ ಹಾಕೂಕೂ ಧೈರ್ಯ ಬೇಕು ಕಣ್ರಯ್ಯ ಅಂದರು. ಇವರಿಗೆ ಬೆಳೆಯಬಹುದೆಂದು ನಂಬಿಕೆ ತುಂಬಿದವರೆಂದರೆ ಮನೆಯಲ್ಲಿನವರು ಮತ್ತು ಹಾಲಕ್ಕಿ ಗೌಡರು. ಹಿರಿಯ ಗೌಡರು 'ಕೃಷ್ಣಸ್ವಾಮಿ ಒಳ್ಳೇ ಮನಸ್ಸಿಂದ ಕಷ್ಟಪಟ್ಟು ದುಡಿಯುರಿಗೆ ದೇವರು ಮೋಸ ಮಾಡಕಿಲ್ಲ. ಹತ್ತೀನ ಲಕ್ಷ್ಮೀ ಅಂತಾರಲ್ಲ, ಆಕೀ ನಿನಗೆ ಒಲ್ದೇ ಒಲೀತಾಳ ಬಿಡು' ಎಂದು ಸ್ಥೈರ್ಯ ತುಂಬಿ ಕಳಿಸಿದ್ದರು. ಕೃಷ್ಣಸ್ವಾಮಿಗೆ ಈಗ ಮನಸ್ಸು ಸ್ವಲ್ಪ ನಿರಾಳವಾಗಿತ್ತು. ಹಿಂಗಾರಿನ ಒಂದು ಮಳೆಯೂ ಬಿದ್ದು ಹದವಾಗಿದ್ದರಿಂದ ಆ ಮಣ್ಣಲ್ಲಿ ಹತ್ತಿ ಬೀಜ ಉದುರಿಸಲು ಅವರ ಮನಸ್ಸು ತವಕಿಸುತ್ತಿತ್ತು. ಬಿತ್ತನೆಯ ದಿನವಂತೂ ಸುಭದ್ರೆ ; ಆಕೆಯ ಬಗಲು ಕೂಸು ಶ್ರೀನಿವಾಸ, ಗೋದಾವರಿಬಾಯಿ, ಎರಡು ಮಕ್ಕಳು ತುಂಬು ಉತ್ಸಾಹದಿಂದ ಹೊಲಕ್ಕೆ ಹೋಗಿದ್ದರು. ಅವರು ಮಾಡುವ ಕೆಲಸ ಏನೂ ಇಲ್ಲವಾಗಿದ್ದರೂ ಅವರೆಲ್ಲರ ಇರುವಿಕೆಯೇ ಕೃಷ್ಣಸ್ವಾಮಿಗಳಿಗೆ ಬೆಳೆ ಕೈಗೆ ಬಂದಾಗ ಆಗುವಷ್ಟು ಖುಷಿಯನ್ನು ತಂದಿತ್ತು. ಕಾಡಜ್ಜ-ದನಿಯ ಮುಂದೆ ನಿಂತು ಮೈಸೂರಿನಿಂದ ಕರೆತಂದಿದ್ದ ಆಳಿನ ಉಸ್ತುವಾರಿಯಲ್ಲಿ ಬೀಜ ತೂರುವ ಕೆಲಸದಲ್ಲಿ ಪಾಲ್ಗೊಂಡರು.

ಬೀಜ ಊರಿ ಒಂದು ಗೊಬ್ಬರ ಉದುರಿಸಿದ ಮೇಲೆ ಸುಮಾರು ಎನ್ನುವಂಥ ಮಳೆ ಬಿತ್ತು. ಮುಂದಿನ ಆರೈಕೆಯನ್ನೆಲ್ಲ ಮೈಸೂರಿನ ಆಳು ಕೃಷ್ಣಸ್ವಾಮಿಗೆ ತಿಳಿಸಿ ಮರಳಿ ಮೈಸೂರಿಗೆ ಹೊರಟು ಹೋಗಿದ್ದ. ಅಲ್ಲಿಯವರೆಗೆ ತೋಟದ ಹೊಸ ಮನೆಯ ಮುಂದಿನ ಹೊಸಕೋಣೆಯಲ್ಲಿ ಅವರ ವಾಸ್ತವ್ಯವಿದ್ದುದ್ದ ರಿಂದ ಆ ಕೋಣೆಯಲ್ಲಿದ್ದ ಕಾಳಿನ ಚೀಲಗಳನ್ನು ಒಳಗೆ ಸೇರಿಸಿದ್ದರು. ಈಗ ಖಾಲಿಯಾದ ಕೋಣೆಯಲ್ಲಿ ಗೊಬ್ಬರವನ್ನು ತುಂಬಿದರು.

ಬೀಜ ಮೊಳಕೆಯೊಡೆದು–ತುಸುತುಸುವೇ ಕಣ್ಬಿಟ್ಟು ಬಳ್ಳಿಯ ಹಾಗೆ ಸುತ್ತೂರ ತನ್ನ ಮೈಚಾಚಿಕೊಳ್ಳುವವರೆಗೆ ಕೃಷ್ಣಸ್ವಾಮಿಗಳು ಇತರ ಕೆಲಸ ಗಳನ್ನು ಸ್ವಲ್ಪ ಕಡಿಮೆ ಮಾಡಿದ್ದರು. ಮನೆಯಲ್ಲಿಯೇ ಇದ್ದ ಪೋಸ್ಟಾ ಫೀಸನ್ನು ಹೊಲ ನೋಡಿಕೊಳ್ಳಲು ಅನುಕೂಲವಾಗುತ್ತದೆಂಬ ಕಾರಣಕ್ಕೆ ತಾವು ಹೆಚ್ಚಿನ ವೇಳೆ ಹೊಸ ಮನೆಯಲ್ಲೇ ಕಳೆಯುತ್ತಿದ್ದುದರಿಂದ ಅಲ್ಲಿಗೇ ವರ್ಗಾಯಿಸಿಕೊಂಡಿದ್ದರು. ಪತ್ರ, ಕಾಗದ, ಟಪಾಲು ಎಂದೆಲ್ಲ ಜನ ಈಗೀಗ ಹೊಸ ಮನೆಗೇ ಹೋಗುತ್ತಿದ್ದರು. ಅರಸೀಕೆರೆಯಿಂದ ಎರಡು–ಮೂರು ದಿನಗಳಿಗೊಮ್ಮೆ ಅಂಚೆಯವನೊಬ್ಬ ಟಪಾಲು ಕೊಟ್ಟು ಹೋಗುತ್ತಿದ್ದ. ಕೃಷ್ಣಸ್ವಾಮಿಗಳೂ ಅರಸೀಕೆರೆಯಲ್ಲಿ ಇರುತ್ತಿದ್ದ ಕೆಲಸಗಳನ್ನು ಹತ್ತು ದಿನ ಕ್ಕೊಮ್ಮೆ ಹೋಗಿ ಒಮ್ಮೆಗೇ ಮುಗಿಸಿಕೊಂಡು ಬರುತ್ತಿದ್ದರು. ಆದರೆ ಅವರ ಹೆಚ್ಚಿನ ಸಮಯವನ್ನು ವ್ಯಯಿಸುತ್ತಿದ್ದುದು ಹತ್ತಿಯ ಹೊಲದಲ್ಲಿ ಮತ್ತು ಕೆಲವು ದಿನಗಳಲ್ಲೇ ಕೆಡವಿಸಲು ಸಜ್ಜಾಗಿ ತೂಗುತ್ತಿದ್ದ ತೆಂಗು ಗೊನೆಗಳು ತುಂಬಿದ ತೋಟದಲ್ಲಿ.

o o o

ಮನುಷ್ಯ ನಂಬಿಕೆ–ಭರವಸೆಗೆ ಮಿಗಿಲಾಗಿ ಇನ್ಯಾವ ದೈವವೂ ಇಲ್ಲವೆನಿ ಸುತ್ತದೆ ಬಹುಶಃ ಅನೇಕ ಮಾತುಗಳನ್ನಾಡಿದ ಅಪನಂಬಿಕೆಯ ಜನರ ಲೆಕ್ಕಾ ಚಾರ ಮುರಿಯುವಂತೆ ; ಕೃಷ್ಣಸ್ವಾಮಿಗಳ, ಅವರ ಹಿತೈಷಿಗಳ ಹಾರೈಕೆ ನಿಜವಾಗುವಂತೆ ಮೂರು ತಿಂಗಳಲ್ಲಿ ಹತ್ತಿಯ ಹೊಲ ವಿಚಿತ್ರ ಕಳೆಯಿಂದ ನಳ ನಳಿಸಿತು. ಹತ್ತಿಯ ಗೊಂಡೆಗಳು ಬಿರಿದು ಬಾಯ್ದೆರೆದವು. ಅವನ್ನು ಚಳಿ–

ಗಾಳಿ, ಹುಳುಹುಪ್ಪಡಿಯಿಂದ ಆರೈಕೆ ಮಾಡಿ ರಕ್ಷಿಸಿದ ಕೃಷ್ಣಸ್ವಾಮಿಗೆ, ಕಾಡಜ್ಜ-ದನಿಯರಿಗೆ ತೃಪ್ತಿಯ ಛಾಯೆಯನ್ನು ತಂದುಕೊಟ್ಟಿದ್ದವು.

ಬಿಳಿಹೂಗಳಹಾಗೆ ಬಿರಿದು ನಿಂತ ಹತ್ತಿಯ ಗೊಂಡೆಗಳನ್ನು ನೋಡಿ ಕೃಷ್ಣಸ್ವಾಮಿಗಳಿಗೆ ಆನಂದ ತುಂಬಿಬರುವುದು. ರಾತ್ರಿಯಾದಮೇಲೆ ಒಮ್ಮೆ ಹೊಲದಲ್ಲಿ ಸುತ್ತಾಡಿಕೊಂಡು ಹೋಗಲು ಬರುತ್ತಿದ್ದ ಅವರಿಗೆ ಕಪ್ಪು ಮಣ್ಣಲ್ಲಿ ಬೆಳದಿಂಗಳು ಹರಿದಾಡಿದ ಹಾಗೆ ಅನಿಸುತ್ತಿತ್ತು. ಸಣ್ಣಗೆ ಸುಳಿಯುವ ಗಾಳಿಗೆ ತಲೆದೂಗುವ ಆ ಹತ್ತಿಹೂವಲ್ಲಿ ಒಂದೊಂದು ಚಂದ್ರ ಕಾಣಿಸುತ್ತಿತ್ತು. ಕೊನೆಗೆ ಮನೆಗೆ ಹೋಗುವ ಮೊದಲು ಹೊಲದ ಅಂಚಿನಲ್ಲಿ ನಿಂತು ನೋಡಿದಾಗ-ಹಾಲು ಉಕ್ಕಿ ಹರಿಯುತ್ತಿದೆ ಎನ್ನುವ ಭಾವನೆ ಅವರಿಗೆ ಬರುತ್ತಿತ್ತು. ಹಾಗೆ ಬೆಳೆದ ಹತ್ತಿಯನ್ನು ನೋಡಲು ಮಕ್ಕಳ ಸಮೇತ ಬಂದಿದ್ದ ಗೋದಾವರಿಬಾಯಿ ಮತ್ತು ಸುಭದ್ರೆ ದೇವರಗೂಡಿನ ಬತ್ತಿಗೆಂದು ಒಂದಿಷ್ಟು ಬಿಡಿಸಿಕೊಂಡು ಹೋಗಿದ್ದರು.

ಒಟ್ಟು ಹನ್ನೆರಡು ಅಂಡಿಗೆಗಳಷ್ಟು ಹತ್ತಿಯನ್ನು ಎರಡು ದಿನಗಳಲ್ಲಿ ಆಳುಗಳು ಬಿಡಿಸಿದರು. ಅದನ್ನು ನಿಧಾನಕ್ಕೆ ವಾರಬಿಟ್ಟು ಮೈಸೂರಿಗೇ ಹೋಗಿ ಮಾರಿದರಾಯಿತೆಂದು ಕೃಷ್ಣಸ್ವಾಮಿ ಆ ಅಂಡಿಗೆಗಳನ್ನು ಹೊಸಮನೆಯ ಪಡಸಾಲೆಯಲ್ಲಿ ಇಡಿಸಿದ್ದರು. ಕಳೆಯನ್ನು ಕಳೆದದಿನ ಎಲ್ಲ ಆಳುಗಳಿಗೂ ಬಟವಾಡೆ ಮಾಡಿ ಅವರು ಮನೆಗೆ ಬಂದಾಗ ಆಗಲೇ ಎಲ್ಲರೂ ರಾತ್ರಿಯೂಟಕ್ಕೆ ಕುಳಿತುಕೊಳ್ಳುವ ಸಮಯವಾಗಿತ್ತು. ಮಕ್ಕಳು ಅಪ್ಪ ಬರುವುದನ್ನೇ ಕಾಯುತ್ತ ಕೂತಿದ್ದರು. ಒಂದು ಲೋಟ ಹಾಲನ್ನು ಕುಡಿದು ಚಾಪೆಗೆ ಒರಗಿ – ಹಾಡು ಗುನುಗುತ್ತ ಮಲಗುತ್ತಿದ್ದ ಗೋದಾವರಿಬಾಯಿ ಸಹ ಆಶ್ಚರ್ಯವೆನ್ನುವಂತೆ ಅಡುಗೆ ಮನೆಯಲ್ಲಿ ಎಲ್ಲರೊಂದಿಗೆ ಹರಟುತ್ತ ಕುಳಿತಿದ್ದರು. ಹಿಂದಿನ ದಿನ ತಾನೇ ತೀರ್ಥಹಳ್ಳಿಯ ಕಡೆಯಿಂದ ಟಪಾಲು ಬಂದಿದ್ದರಿಂದ ಭಾಗೀರಥಿಯ ವಿಷಯವನ್ನೇ ಹರಟೆ ಕೊಚ್ಚುತ್ತಿದ್ದರು. ಕೃಷ್ಣಸ್ವಾಮಿಗಳು ಜಗುಲಿ ಬಚ್ಚಲಿನಲ್ಲಿ ಕಾಲುತೊಳೆದು ಎಲೆಯ ಮುಂದೆ ಬಂದು ಕುಳಿತಾಗ ಎಲ್ಲರ ಮುಖದಲ್ಲಿ ನಗುತುಂಬಿದ್ದು ; ಗೋದಾವರಿಬಾಯಿ ಇನ್ನೂ ಎಚ್ಚರದಿಂದಿದ್ದುದ್ದು ಕಂಡು 'ಏನೇ ಅಮ್ಮ, ಖುಷಿಯಲ್ಲಿರೋ ಹಾಗಿದೆ....' ಅಂದರು. 'ನನ್ನ ಸಂತೋಷಕ್ಕೆ ಇನ್ನೇನು ಕಾರಣ ಇರುಕ್ಕೆ ಸಾಧ್ಯವೋ ಕಂದಾ, ನಿಮಗೆ ಒಳ್ಳೆಯದಾದರೆ, ಈ

ಮನೆ ನಗುನಿಂದ ಮತ್ತೆ ತುಂಬುದಾದ್ರೆ ಖುಷಿಯಾಗುಲ್ಲ ? ನೀನೇ ಹೇಳು ಎಂದರು....' ಗೋದಾವರಿಬಾಯಿ ಮಾತು ಮುಗಿಸಿದಮೇಲೆ ಕೃಷ್ಣಸ್ವಾಮಿಗಳು ಸುಭದ್ರೆಯತ್ತ ತಿರುಗಿ ನೋಡಿದಾಗ ಸುಭದ್ರೆ ನಾಚಿಕೆಯಲ್ಲಿ ಮೊಳಕಾಲಿಗೆ ಗಲ್ಲಕೊಟ್ಟು, ಕಣ್ಣುಮುಚ್ಚಿ ಮುಗುಳುನಗೆ ನಕ್ಕರು. ಕೃಷ್ಣಸ್ವಾಮಿಗೆ ಹೇಗೆ ಪ್ರತಿಕ್ರಿಯಿಸಬೇಕೋ ತಿಳಿಯದಾದಾಗ ಗೋದಾವರಿಬಾಯಿಯೇ ಮುಂದಾಗಿ- 'ಈ ಸಿಹಿವಿಚಾರ ತಿಳಿಸುಕ್ಕೆ ನಾನೇ ಶಾವಿಗೆ ಪಾಯಸ ಮಾಡಿದ್ದೀನೋ.... ಓಡಿರೀ ಎಲ್ಲಾರು ಮೊದಲು ಪಾಯಸ ಕುಡೀರಿ, ಸುಭದ್ರಾ ನೀನು ಇವ ತ್ತೊಂದು ದಿನಾನಾದ್ರೂ ಇವರ ಜೋಡೀನೆ ಊಟಕ್ಕೆ ಕೂಡು, ನಾನೇ ಬಡಿಸ್ತೀನಿ....' ಎಂದು ಎಲ್ಲರ ಎಲೆಯ ಮುಂದೆ ಇಟ್ಟಿದ್ದ ಬೆಳ್ಳಿ ಬಟ್ಟಲುಗಳಿಗೆ ಪಾಯಸ ಹಾಕಿದರು. ಮಕ್ಕಳು ಮೂರು ಮೂರು ಬಟ್ಟಲು ಪಾಯಸ ಕುಡಿದರೆ; ಕೃಷ್ಣಸ್ವಾಮಿಗೆ, ಸುಭದ್ರೆಗೆ ಆ ಒಂದು ಬಟ್ಟಲೇ ಸಾಕಾಗಿತ್ತು. ಎದುರಿಗಿದ್ದ ಸಿಹಿಗಿಂತ ಹೆಚ್ಚಿನ ಸಿಹಿ ಮನದಲ್ಲಿ ತುಳುಕುತ್ತಿರುವಾಗ ಅವರಿ ಗಾದರೂ ಅದು ಎಲ್ಲಿ ಸೇರಬೇಕು. ಊಟದ ನಂತರ ಎಂದಿನಂತೆ ಎಲ್ಲರೂ ಮಲಗಲು ಹೋಗದೆ ಪಡಸಾಲೆಯಲ್ಲಿ ಪಗಡೆಯಪಟ್ಟೆ ಹಾಸಿ ಸುಮಾರು ಹೊತ್ತಿನವರೆಗೆ ಪಗಡೆಯಾಟ ಆಡಿದರು.

ಹಾಗೆ ಪಗಡೆಯಾಟ ಆಡುವಾಗ ಗೋದಾವರಿಬಾಯಿಗೆ, ಕೃಷ್ಣಸ್ವಾಮಿ ಗಳಿಗೆ ಹಳೆಯ ದಿನಗಳು ನೆನಪಾದವು. ದೀಪಾವಳಿಯ ಹಿಂಚುಮುಂಚು, ನರಸಯ್ಯನವರು ಬದುಕಿದ್ದಾಗ, ಫೇಟು ಹೀಗೆಯೇ ಪಗಡೆಯಾಟವನ್ನು ಅವರು ಆಡುತ್ತಿದ್ದರು. ಅದೂ ನರಕಚತುರ್ದಶಿಯಂತೂ ಇಡೀ ರಾತ್ರಿ ನಿದ್ದೆ ಮಾಡಬಾರದಲ್ಲ ಆಗ–ಕೃಷ್ಣ, ನಾರಾಯಣ, ಭಾಗೀರಥಿ ಒಂದು ಪಂಥವಾದರೆ ನರಸಯ್ಯ–ಗೋದಾವರಿಬಾಯಿ ಇನ್ನೊಂದು ಪಂಥವಾಗಿ ನಸುಕು ಮೂಡಿ, ರಾತ್ರಿ ಹಂಡೆಯಒಲೆಗೆ ಹಾಕಿದ ಬೆಂಕಿಗೆ ನೀರು ಸುಡುಸುಡು ಕಾಯುವ ವರೆಗೂ ಆ ಆಟ ಮುಂದುವರಿಯುತ್ತಿತ್ತು. ಆಟದ ನಡುವೆ ನಗು–ಕೇಕೆ, ಸೋತರೆ ಮುನಿಸು.... ಇಂದು ಮತ್ತೆ ಆ ಅದೇ ಸನ್ನಿವೇಶ ಮರುಕಳಿಸಿತ್ತು. ಕೃಷ್ಣಸ್ವಾಮಿಗಳು ಹಳೆಯ ನೆನಪಿಂದ ಅಮ್ಮನ ಮನಸ್ಸಿಗೆ ಘಾಸಿಯಾಗಿದೆಯಾ? ಇಣುಕಿ ಒಮ್ಮೆ ಅವರತ್ತ ದಿಟ್ಟಿಸಿನೋಡಿದರು. ಗೋದಾವರಿಬಾಯಿ ಮಕ್ಕ ಳೊಂದಿಗೆ ಉತ್ಸಾಹದಿಂದ ನಗುತ್ತಿದ್ದುದು ಅವರಿಗೆ ತೃಪ್ತಿ ತರಿಸಿತು. ಮಧ್ಯ

ರಾತ್ರಿಯ ಯಾವುದೋ ಹಕ್ಕಿ ಪದೇಪದೇ ಕೂಗಿ, ಮಕ್ಕಳ ಕಂಗಳಿಗೆ ನಿದ್ದೆ ತುಂಬಿ ತೂಕಡಿಸಲು ತೊಡಗಿದಾಗ ಎಲ್ಲರೂ ಎದ್ದು ಮಲಗಲು ಹೋದರು. ಎರಡೂ ಮಕ್ಕಳು ಪ್ರತಿದಿನ ತಮ್ಮ ಅಮ್ಮನೊಂದಿಗೆ ಮಲಗುತ್ತಿದ್ದರೂ ಇಂದು ಗೋದಾವರಿಬಾಯಿ ತಾವೇ ತಮ್ಮ ಬಳಿ ಮಲಗಿಸಿಕೊಳ್ಳುವುದಾಗಿ ಹೇಳಿ ನೀವಿಬ್ಬರೂ ಹಾಯಾಗಿ ಮಲಗಿ ಎಂದರು. ಸುಭದ್ರೆ-ಕೃಷ್ಣಸ್ವಾಮಿ ಹಿಂದೆ ಅಪ್ಪಯ್ಯ-ಅಮ್ಮ ಮಲಗುತ್ತಿದ್ದ ಈಗ ತಮ್ಮದಾದ ಕೋಣೆಗೆ ಹೋಗುವ ಮೊದಲು ಗೋದಾವರಿಬಾಯಿಯ ಕರುಳೇಕೋ ಉಕ್ಕಿಬಂದಂತಾಗಿ 'ಕೃಷ್ಣಾ ಮರೀ' ಎಂದು ಕರೆದರು. ಕೃಷ್ಣಸ್ವಾಮಿಗಳು ಅವರ ಮುಂದೆ ಹೋಗಿ ನಿಂತಾಗ ಮೆಲ್ಲಗೆ ಅವರ ಬೆನ್ನ ಮೇಲೆ ಕೈಯಾಡಿಸಿ ಕಿವಿಹಿಂಡಿದರು. 'ಹೋಗು ಮಲಗು' ಎಂದರು. ಅರೆನಿದ್ದೆ-ಅರೆಎಚ್ಚರದಲ್ಲಿರುವ ನರಸಿಂಹ-ಶಾರದೆಯರನ್ನು ಎತ್ತಿ, ನಿಧಾನಕ್ಕೆ ನಡೆಸಿ ಹಾಸಿಗೆಗೆ ಒಯ್ಯುತ್ತ 'ಲೋ ಮಕ್ಕಳಾ ನಿಮಗೆ ತಂಗಿಬೇಕೋ - ತಮ್ಮಬೇಕೋ ? ಗೊಂಬೆಯಂಥದು—' ಎಂದು ಮಕ್ಕಳಿಗೆ ಕೇಳುತ್ತಿರುವ ಅವರ ದನಿಯನ್ನು ಸುಭದ್ರೆ-ಕೃಷ್ಣಸ್ವಾಮಿ ತಮ್ಮ ಕೋಣೆಯಿಂದ ಆಲಿಸಿದರು.

'ಏನೇ ಸುಭದ್ರಾ, ನನ್ನನ್ನ ನೀನು ಕೆಟ್ಟವನು ಅಂತೀಯಾ, ನಾನು ಕೆಟ್ಟ ಕೆಲಸ ಮಾಡಿದರೆ ಮತ್ಯಾಕೆ ಅಮ್ಮ ಇಷ್ಟು ಖುಷಿಯಾಗ್ತಾಳೆ ?'— ಎಂದು ಸುಭದ್ರೆಯ ಹೊಟ್ಟೆಸವರುತ್ತ ಕೃಷ್ಣಸ್ವಾಮಿಗಳು ಕೇಳಿದಾಗ ಸುಭದ್ರೆ ನಾಚಿ, ಅವರ ಕೈ ಒದರಿ- 'ಈ ಕೆಟ್ಟ ಕೆಲಸಬಿಟ್ಟರೆ ನಿಮಗಿನ್ನೇನು ಕೆಲಸ' ಎಂದು ಮಂಚಕ್ಕೆ ಆತು ಕೂತಳು. 'ನೀನು ಏನೇ ಹೇಳೇ ಅಮ್ಮಂಗೆ ಸಂತೋಷವಾಗುದಾದ್ರೆ ಪ್ರತಿ ವರ್ಷನೂ ನಾನಿಂಥ ಕೆಟ್ಟ ಕೆಲಸ ಮಾಡುಕ್ಕೆ ತಯಾರು ಕಣೇ.... ಆದ್ರೆ ಏನ್ಮಾಡೊದು ವರ್ಷಕ್ಕೊಂದೆಯಲ್ಲ ಸಾಧ್ಯವಾಗುದು....' ಎಂದು, ಸುಭದ್ರೆ ಮತ್ತಷ್ಟು ನಾಚಿಕೆಯಲ್ಲಿ ಮುದುರಿ ಕುಳಿತುಕೊಳ್ಳುವಂತೆ ಮಾಡಿದರು.

ಸುಭದ್ರೆ ಮಂಚದಿಂದೆದ್ದು ಕಿಡಕಿಗೆ ಹೋಗಿ ನಿಂತಳು. ಹಾಗೆ ನೋಡುತ್ತ ನೋಡುತ್ತ ಸುತ್ತಲಿನ ಮರಗಳಿಂದ ತಂಗಾಳಿ ಬೀಸತೊಡಗಿ ಮಂಚಕ್ಕೆ ಬಂದು ಒರಗಿದಳು. ಆ ತಂಗಾಳಿ ಕೋಣೆಯೆಲ್ಲ ತುಂಬಿ, ಅವರ ಮೈಯೆಲ್ಲ ತುಂಬಿ, ಋತುಗಳು ಹಾರಿ, ಅವರ ಮೈಗಳು ತೂರಿ, ಹಾಲುಕ್ಕಿ ಹರಿದು.... ಅವರು

ನಿದ್ದೆಗೆ ಜಾರಿದಾಗ ಎಲ್ಲಿಂದಲೋ ಕತ್ತುನಿಗುರಿಸಿ ಈ ಹಳ್ಳಿಯ ಕೋಳಿ, ಆ ಹಳ್ಳಿಯ ಜತೆಗಾರ ಕೋಳಿಯ ಜಾಡು ಹಿಡಿದು ಕೂಗಿತು....

o o o

ಇದು ಸುಭದ್ರೆಯ ನಾಲ್ಕನೆಯ ಹೆರಿಗೆಯಾದರೂ ಮನೆಯಲ್ಲಿನವರು ಮೊದಲ ಮಗುವಿನ ಬರುವಿಕೆಗಾಗಿ ಕಾಯುವಂತೆ ಕಾದರು. ಗೋದಾವರಿ ಬಾಯಿ ಹೂ ಬಿಟ್ಟ ಮಂಜು ಕಣ್ಣಲ್ಲಿ ಸೊಸೆಯ ಉಪಚಾರಕ್ಕೆ ಮುಂದಾಗುವರು. ವಯಸ್ಸು ಮರೆತು ಎಲ್ಲ ಕೆಲಸಗಳಿಗೂ ತಾವೇ ಕೈ ಹಾಕುವರು. 'ನಿನಗೆ ಕಣ್ಣು ಕಾಣದು ಒಂದೆಡೆ ಕೂತು ದೇವರ ನಾಮ ಹಾಡಿಕೊಂಡು ಕಾಲ ಕಳೀಬಾರದೇ'— ಎಂದು ಕೃಷ್ಣಸ್ವಾಮಿ ಅಂದರೆ 'ನೀ ಸುಮ್ಮನಿರೋ ಗಂಡಸಿಗ್ಯಾಕೆ ಗೌರಿ ದುಃಖ ? ಆಕೆ ನನ್ನ ಸೊಸೆ- ನನ್ನಿಷ್ಟ ; ವರ್ಷಗಳಾದ ಮೇಲೆ ಮೈ ತುಂಬಿಕೊಂಡಿದಾಳೆ, ಏನಾದರೂ ಹೆಚ್ಚು ಕಮ್ಮಿಯಾದ್ರೆ ?' ಎಂದು ದಬಾಯಿಸಿ ಅವರಿಗೆ ತರಾಟೆಗೆ ತೆಗೆದುಕೊಳ್ಳುವರು, 'ಹೋಗಲಿ ಮೈಸೂರಿಗೆ ಹೋಗಿ ಕಣ್ಣು ಪರೀಕ್ಷೆ ಮಾಡಿಸುವಾ, ಕನ್ನಡಕ ಹಾಕ್ಕೊಂಡ್ರೆ ಸರಿಹೋಗುತ್ತೆ' ಅಂತಂದರೆ 'ಏನೂ ಬೇಡ ನನಗೇನಾಗಿದೆ ಅಂಥದ್ದು- ನಿನಗೆ ಹೊತ್ತಾಯ್ತು ನೀನಿನ್ನು ತೋಟಕ್ಕೆ ಹೊರಡು' ಎಂದು ಮಾತು ಮರೆಸುವರು. 'ಸರಿ, ನೀನುಂಟು ನಿನಗೆ ಮಗು ಹೆತ್ತುಕೊಡೋ ಆ ನಿನ್ನ ಸೊಸೆಯುಂಟು, ಮಧ್ಯೆ ನಾನ್ಯಾರು ಮಾತಾಡುಕ್ಕೆ ಜೋಕುಮಾರ' ಎಂದು ನಗುತ್ತ ಕೃಷ್ಣಸ್ವಾಮಿಗಳು ಜಗುಲಿ ಮೆಟ್ಟಿಲಿಳಿದು ಹೊರಟರೆ, ಸುಭದ್ರೆ- ಜೋಕುಮಾರ ಎಂಬ ಪದದ ಅರ್ಥವಾಗಿ ತನ್ನಲ್ಲೇ ನಗುವಳು.

ಕೃಷ್ಣ, ಕೃಷ್ಣಸ್ವಾಮಿ ಎಂದು ಕರೆಯಿಸಿಕೊಳ್ಳಲು ಪ್ರಾರಂಭಿಸಿದಾಗಲೇ ಅವರ ಬಟ್ಟೆಯಲ್ಲೂ ಬದಲಾವಣೆಯಾಗಿತ್ತು. ಮೊದಲೆಲ್ಲ ಒಂದು ಪಾಣಿ ಪಂಚೆ, ಮೇಲೊಂದು ದೊಗಳೆ ಅಂಗಿ ಹಾಕಿದರೆ ಮುಗಿಯಿತು.-ಕೃಷ್ಣ ಎನ್ನುವಂತಿದ್ದವರು, ಈಗ ಮೈಸೂರಿನಲ್ಲಿ ವಿಶೇಷ ಸಿಂಪಿಯೊಬ್ಬನಿಗೆ ಹೇಳಿ ಹೊಲಿಸಿದ್ದ ಎರಡು ನೀಳಕೋಟು, ತಲೆಗೆ ಮೈಸೂರುಪೇಟ, ಜರಿಯಪಂಚೆ, ಕಾಲಿಗೆ ಮೈಸೂರಿನಲ್ಲೇ ಕೊಂಡ ಜಿರಕಿಯ ಚಪ್ಪಲಿಗಳು ಬಂದಿದ್ದವು. ವಾರಕ್ಕೊ-

ಹತ್ತು ದಿನಕ್ಕೊಮ್ಮೆ ಒಮ್ಮೆ ತಮ್ಮ ಕೋಟು, ಪೇಟ, ನೆಹರೂ ಷರ್ಟ್‌ಗಳನ್ನು ತಾವೇ ಒಗೆದು ತರಲು ಶಾರದೆ–ನರಸಿಂಹರೊಂದಿಗೆ ಹೊಳೆಗೆ ಹೋಗುವರು. ನರಸಯ್ಯನವರು ಕುಳಿತು ಉಜ್ಜುತ್ತಿದ್ದ ಕಲ್ಲುಬಂಡೆಯ ಮೇಲೆಯೇ ತುದಿ ಗುಂಡಿಯಲ್ಲಿ ಕುಳಿತು ಲಕಲಕ ಹೊಳೆವ ಹಾಗೆ ಬಟ್ಟೆ ಒಗೆದು–ಒಣಗಿಸಿ ತಂದು ಇದ್ದಿಲು ಹಾಕಿ ಇಸ್ತ್ರೀ ತಿದ್ದುವ ಪೆಟ್ಟಿಗೆಯಿಂದ ತಮ್ಮ ಬಟ್ಟೆ-ಮಕ್ಕಳ ಶಾಲೆಯ ಬಟ್ಟೆಗಳನ್ನು ತಿದ್ದುವರು. ಮಲ್ಲಿಗೆಹಳ್ಳಿಯಲ್ಲಿ ಶಾಲೆಗೆ ಇಸ್ತ್ರಿ ತಿದ್ದಿದ ಬಟ್ಟೆ ಹಾಕಿಕೊಂಡು ಬರುವವರೆಂದರೆ ನರಸಿಂಹ–ಶಾರದೆ ಮಾತ್ರ !

ಈ ಸಲದ ಮುಂಗಾರು ಕಳೆದು ವಾರಕ್ಕೊ-ಹತ್ತು ದಿವಸಕ್ಕೊ ಸುಭದ್ರೆಯ ಹೆರಿಗೆಯಾಗಬಹುದೆಂದು ಗೋದಾವರಿಬಾಯಿ ಲೆಕ್ಕಾಚಾರ ಹಾಕಿದ್ದರು. ಪ್ರತಿಸಲವೂ ಸುಭದ್ರೆಯ ತಾಯಿಯನ್ನು ದಾವಣಗೆರೆಯಿಂದ ಕರೆಸುವುದು, ಅಷ್ಟು ದೂರದಿಂದ ಗಂಡನನ್ನು ಒಬ್ಬಂಟಿಯಾಗಿ ಬಿಟ್ಟು ಪ್ರಯಾಣ ಮಾಡುವುದು ಅವರಿಗೆ ತುಸು ಸಂಕೋಚದ ವಿಚಾರವಾಗಿ ಕೃಷ್ಣಸ್ವಾಮಿಗೆ ಹೇಳಿ ಭಾಗೀರಥಿಗೊಂದು ಪತ್ರ ಬರೆಸಿದ್ದರು. 'ಹೇಗಾದರೂ ಸರಿ ಈ ಹೆರಿಗೆಗೆ ಅಮ್ಮನ ಸಹಾಯಕ್ಕೆ ನೀನು ಬರಬೇಕು, ಸಾಧ್ಯವಾದರೆ ಸುರೇಂದ್ರನನ್ನು ಜತೆಯಲ್ಲಿ ಕರೆದುಕೊಂಡು ಬಾ' ಎಂದು ಕೃಷ್ಣಸ್ವಾಮಿಗಳೂ ಬರೆದಿದ್ದರು. ಅವರಿಗೂ ಹತ್ತಿರದ ಸಂಬಂಧಿಗಳಿಗೆ, ಪರಿಚಯದವರಿಗೆ ತಿಂಗಳಿಗೊಮ್ಮೆ ವಿವರವಾಗಿ ಪತ್ರ ಬರೆಯುವುದು ಖುಷಿಯ ವಿಚಾರ. ಮೈಸೂರಿನ ಒಂದಿಬ್ಬರು ಗೆಳೆಯರಿಗಂತೂ ಅವರು ಬರೆಯುತ್ತಿದ್ದುದು ಇಂಗ್ಲೀಷಿನಲ್ಲೇ ! ಇವರ ಪತ್ರಗಳನ್ನೆಲ್ಲ ಆಸಕ್ತಿಯಿಂದ ಕಾದು ಓದುತ್ತಿದ್ದ ಮೈಸೂರು ಮಿತ್ರರು ಇವರಿಗೆ ತಮಾಷೆಯಲ್ಲಿ ಹೇಳಿದ್ದಿದೆ : 'ಅಲ್ಲ ಮಾರಾಯಾ ನಾನೂ ರೂಲು ದೊಣ್ಣೆ ಗೀಟು ಹೊಡೆದು ಪಾಣಿಪಟ್ಟಿ ಬರೆಯೋ ಎಷ್ಟೋ ಶಾನುಭೋಗರನ್ನ ನೋಡಿದ್ದೇನೆ. ಆದರೆ ಅವರ್‍ಯಾರೂ ನಿನ್ನ ಹಾಗೆ ಚೆಂದವಾಗಿ ಬರೆಯೊಲ್ಲ. ಇಷ್ಟು ಪೈನಾಗಿ ಬರೆಯೋ ನೀನ್ಯಾಕೆ ಕಾದಂಬರಿನೋ ಅದು–ಇದು ಅಂತ ಬರೀಬಾರದು ? ಈಗಂತೂ ನಾಕಕ್ಷರ ಇಂಗ್ಲೀಷು ಕಲಿತ ಜಾಣರೆಲ್ಲ ಎಷ್ಟೊಂದು ಬರೆದು ಹೆಸರು ಮಾಡಿದ್ದಾರೆ, ನೋಡಿದ್ದೀಯಲ್ಲ ? ಹೇಗಿದ್ರೂ ಷೇಕ್ಸ್‌ಪಿಯರ್, ಥಾಮಸ್ ಹಾರ್ಡಿ ಅಂತ ಅಷ್ಟಿಷ್ಟು ನೀನೂ ಓದಿಕೊಂಡಿದ್ದೀಯಲ್ಲ ?' ಎಂದು. ಅದಕ್ಕೆ ಕೃಷ್ಣಸ್ವಾಮಿಗಳು ತಲೆ ಅಲುಗಿಸಿ– 'ಹಾಗಲ್ಲವೋ,

ನೋಡು ಈ ಜಗತ್ತಿಗೆ ಬರೂವಾಗ ಎಲ್ಲ ಒಂದೊಂದು ಕಲೆ ಕೈಯಲ್ಲಿ ಹಿಡಕೊಂಡೇ ಬಂದಿರ್ತಾರೆ ಕಣಯ್ಯ. ಕೆಲವರು ಅದನ್ನ ಬರುದು ಬೇರೆಯವರಿಗೆ ಹಾಡಿಕೊಳ್ಳಲು ಕೊಡುತ್ತಾರೆ. ಇನ್ನೂ ಕೆಲವರು ರಾಗ ಕಲಿತು ಮಧುರವಾಗಿ ಹಾಡಿ ಜನರನ್ನು ಅರಳಿಸ್ತಾರೆ. ಇನ್ನೂ ಕೆಲವರು ಲಯ ಜೋಡಿಸಿ ಕುಣಿದು ಆ ಹಾಡಿಗೆ ಇನ್ನೊಂದು ರೂಪ ಕೊಡ್ತಾರೆ. ಅದೆಲ್ಲ ಅವರವರ ಸಂಸ್ಕಾರ. ಎಲ್ಲರೂ ಯಾಕೆ ಬರೆಯೋದು ? ಅಭಿನಯಿಸೋದು ? ಹಾಡೋದು ? ಅದನ್ನ ಸವಿಯೋ ಮನಸ್ಸಿದ್ರೆ ಸಾಕು ಮಾರಾಯಾ. ಓದಿದ್ದನ್ನ, ಕಣ್ತೆರೆದು ನೋಡಿ ಅರಿತಿದ್ದನ್ನ, ತಿಳಿದು ಹಾಗೇ ಬದುಕಲು ಯತ್ನಿಸಿದರೆ ಸಾಕು. ನನಗೆ ಬರೆಯೋ ಬದಲು ಒಳ್ಳೆ ಮಗ, ಒಳ್ಳೆ ಗಂಡ, ಒಳ್ಳೆ ತಂದೆಯಾಗಿರಲು ಹೆಚ್ಚು ಖುಷಿ. ನನ್ನ ತೋಟವನ್ನ ಬೆಳೆಸೋದರಲ್ಲಿ ಹೆಚ್ಚು ತೃಪ್ತಿ. ನಮ್ಮೆದುರೇ ಬೆಳೆದು ನಮ್ಮ ಕೈತುಂಬ ಫಲ ಕೊಡುವ ಬೆಳೆಯನ್ನ ನೋಡೋದರಲ್ಲಿ ಆನಂದ.... ಏನಂತೀಯ ?ಒಳ್ಳೆಯ ಸಂಸಾರಸ್ಥ ಯಾವ ಕಲೆಗಾರನಿಗಿಂತ ಕಡಿಮೆಯಲ್ಲ ತಿಳಕೋ....' ಅನ್ನುವರು. ಅವರ ಗೆಳೆಯರೋ 'ಸರಿ ಮಾರಾಯಾ ನೀನು ಹೇಳಿದ್ದಕ್ಕೆ ಎದುರುಂಟೆ'– ಎಂದು ತಮ್ಮ ಸೋಲನ್ನು ಒಪ್ಪಿಕೊಂಡು ಬಿಡುವರು.

ಹಾಗೆಲ್ಲ ಬಲವಾಗಿ ಕಾಡಿದ್ದನ್ನ ಮನೆಗೆ ಬಂದ ಮೇಲೆ ಡೈರಿಯಲ್ಲಿ ಬರೆದಿಡುವರು. ಹಿಂದೆ ಬರೆದದ್ದನ್ನೆಲ್ಲ ಮತ್ತೊಮ್ಮೆ ಓದಿಕೊಳ್ಳುವರು. ಅವರ ದಿನಂಪ್ರತಿ ವ್ಯವಹಾರವನ್ನೆಲ್ಲ ಒಂದು ದಿನವೂ ತಪ್ಪದಂತೆ ಅವರು ತಮ್ಮ ಡೈರಿಯಲ್ಲಿ ದಾಖಲಿಸುತ್ತಲೇ ಬಂದಿದ್ದಾರೆ. ರಾತ್ರಿ ಊಟದ ನಂತರ ಎಲ್ಲರೂ ಮಲಗಲು ಹೋದರೆ ಇವರು ಒಂದು ಗಂಟೆಯಷ್ಟು ಪುಸ್ತಕಗಳನ್ನು ಓದುವುದು– ಆಮೇಲೆ ಡೈರಿ ಬರೆದಾದ ಮೇಲೆ ಮಲಗುವುದು ಅವರ ಪದ್ಧತಿಯೇ ಆಗಿತ್ತು. ಅಂದು ರಾತ್ರಿ ಊಟ ಮಾಡಿದ ಮೇಲೆ ಕೃಷ್ಣಸ್ವಾಮಿ– ಸುಭದ್ರೆ ಮಲಗುವ ಕೋಣೆಗೆ ಹೋದ ಮೇಲೆ ಎಷ್ಟೋ ಹೊತ್ತು ಮಾತಾಡುತ್ತ ಕೂತರು. ಸುಭದ್ರೆ ಮಲಗಿದ ಮೇಲೆ ತಮ್ಮ ಡೈರಿಯನ್ನು ತೆಗೆದುಕೊಂಡ ಕೃಷ್ಣಸ್ವಾಮಿ ಬರೆದರು :

'ಸುಭದ್ರೆ ಎಂದಿಗಿಂತ ಹೆಚ್ಚು ಚಂದವಾಗಿ ಕಾಣತೊಡಗಿದ್ದಾಳಲ್ಲ ಇತ್ತೀಚೆಗೆ ? ದಿನದಿನವೂ ಅವಳ ಚೆಲುವು ಹೆಚ್ಚುತ್ತಿರುವಂತೆ ಕಾಣುತ್ತದೆ. ಅಮ್ಮ ಬೆಳೆಯುವ ಈಕೆಯ ಗರ್ಭನೋಡಿ ಅದೆಷ್ಟು ಸಂತಸದಲ್ಲಿ ಬೀಗುತ್ತಾಳೆ.

ಇನ್ನೊಂದು ಮಗುವನ್ನು ಕಾಣಲು ಅಮ್ಮನ ಮನಸ್ಸು ಹಾತೊರೆಯುತ್ತಿರುವಂತಿದೆ. ಮೊಮ್ಮಗುವಿನ ಸೆಳೆತ ಅವಳನ್ನು ಎಳೆಯುತ್ತಿರುವಂತಿದೆ. ಹೆಣ್ಣಿನ ಮನಸ್ಸು ಎಷ್ಟು ವಿಚಿತ್ರ ? ಈ ಅಮ್ಮ, ಈ ಸುಭದ್ರೆ, ಈ ಭಾಗೀರಥಿ.... ಅಪ್ಪಯ್ಯ ಹೆಣ್ಣನ್ನು ಪ್ರಕೃತಿಗೆ, ಮಣ್ಣಿಗೆ ಹೋಲಿಸುತ್ತಿದ್ದರು. ಮನುಷ್ಯನಿಗೂ- ಭೂಮಿಗೂ ಇರುವ ನಿರಂತರ ಸಂಬಂಧದಂತೆಯೇ, ಹೆಣ್ಣು-ಗಂಡಿನ ಸಂಬಂಧವೂ ಇರಬೇಕು. ಅಲ್ಲ, ಏನು ಸೆಳೆತ ಇದು ? ಅಕ್ಕ, ತಂಗಿ, ಹೆಂಡತಿ, ತಾಯಿ, ಮಗಳು.... ಏನೇ ಬದಲಾದರೂ ಈ ಉತ್ಕರ್ಷ ಬದಲಾಗುಲ್ಲ. ಹಾಗೆ ನೋಡಿದರೆ ನಾನೂ ಎಷ್ಟೆಲ್ಲ ಬದುಕು ಕಂಡಿಲ್ಲ ? ; ಅಪ್ಪಯ್ಯ-ಅಮ್ಮ, ಅಜ್ಜ-ಅಜ್ಜಿಯರ ಕುರಿತ ಕಥ, ನಾನು-ಸುಭದ್ರೆ, ಹತ್ತಾರು ಸಂಸಾರಗಳು.... ಆಗಿನದ್ದಕ್ಕೂ-ಈಗಿನದ್ದಕ್ಕೂ ಎಷ್ಟೆಲ್ಲ ಬದಲಾವಣೆ ಹೊಂದಿದ್ದರೂ ಮನುಷ್ಯರ ನಡುವೆ ಎಷ್ಟೋ ಮನಸ್ತಾಪ, ರಗಳೆ, ರೇಜಿಗೆ ಹುಟ್ಟಿಕೊಂಡರೂ ಅವು ಒಳಗಡೆ ಗಟ್ಟಿಯಾಗುತ್ತಲೇ ಇರ್ತ್ತವೇನೋ. ಮನುಷ್ಯನ ಒಂಟಿತನದಲ್ಲೂ, ನಿರಾಶೆಯಲ್ಲೂ, ಹತಾಶೆಯಲ್ಲೂ ಆತ ಎಲ್ಲವನ್ನೂ ಹೇಗಿತ್ತೋ ಹಾಗೇ ಉಳಿಸಿಕೊಳ್ಳಲು ಯತ್ನಿಸುತ್ತಾನಲ್ಲಾ, ಭೂಮಿಯೊಂದಿಗೆ ನಿರಂತರ ಜತೆಯಾಗಿ ಬೆಳೆತೆಗೆವಂತೆ, ಅದು ಮುನಿದರೂ-ಪ್ರಕೃತಿ ರೊಚ್ಚಿಗೆದ್ದರೂ ಅದಕ್ಕೆಲ್ಲ ತಲೆಬಾಗಿ, ತನ್ನ ದುಃಖಕ್ಕೆ ಸಂತಸದ ಅಂತ್ಯಕೊಡುತ್ತಾನಲ್ಲ ? ನಮ್ಮ ಕಾಡಜ್ಜನ ಸಂಬಂಧವೇ ನೋಡಿದರೆ ಗೊತ್ತಾಗುತ್ತದೆ. ಅವನ ಹೆಂಡತಿ ಲಚ್ಚುಮಿ.... ಒಟ್ಟಲ್ಲಿ ಎಲ್ಲ ತಿಳಿದೂ ತಿಳಿಯದಂಥವು ಇವು. ತಿಳಿಯಾಗುತ್ತದೆ ಅನಿಸುವಾಗ ಜಾರಿಬಿಡುತ್ತವೆ. ಇನ್ನೇನು ಜಾರುತ್ತಿದೆ ಅಂದುಕೊಂಡು ಕೈ ಚೆಲ್ಲಿದರೆ ಕೈಯಲ್ಲೇ ಉಳಿಯುತ್ತವೆ....

ಇವತ್ತು ಬೆಳಿಗ್ಗೆ ತೋಟಕ್ಕೆ ಹೋಗಿ ತೆಂಗಿನ ಮರಗಳನ್ನು ನೋಡಿ, ನೀರು ಬಿಟ್ಟು ಮನೆಗೆ ಬಂದಾದ ಮೇಲೆ ಅಮ್ಮ-ಮಕ್ಕಳು-ಸುಭದ್ರಾ ಎಲ್ಲರೂ ಹಿತ್ತಲಲ್ಲಿರುವುದು ಕಂಡು ಅಲ್ಲಿಗೆ ಹೋದೆ. ಗಬ್ಬದಲ್ಲಿದ್ದ ರೋಹಿಣಿ ಹಸು ಮರಿ ಹಾಕುತ್ತಿತ್ತು. ನಾವೆಲ್ಲ ಅದರೆದುರು ನಿಂತಿದ್ದಕ್ಕೆ ಅದಕ್ಕೆ ಭಯ. ಅಮ್ಮನ ಹೊರತಾಗಿ ನಾನು ಎಲ್ಲರನ್ನೂ ಒಳಗೆ ಕರೆತಂದೆ. ಆಗ ಅದಕ್ಕೆ ನಿರಾಳವಾಗಿ ಸುಲಭವಾಗಿ ಮರಿ ಹೊರಬರುವಂತಾಯಿಯಿತು. ಮಮತೆ ಎನ್ನುವುದು ಮಾತು ಬರದ ಪ್ರಾಣಿಗೂ ಗೊತ್ತಿರದಾ ? ಗೊತ್ತಾಗುವುದಿಲ್ಲ.

ಕೆಳಗೆ ಮುದ್ದೆಯಂತೆ ಬಿದ್ದ ಕರುವನ್ನು ತನ್ನ ನಾಲಿಗೆಯಲ್ಲಿ ನೆಕ್ಕಿ ನೆಕ್ಕಿ ರೋಹಿಣಿ ಆರೈಕೆ ಮಾಡಿದ ರೀತಿ ನೋಡಬೇಕಿತ್ತು. ಕರುವನ್ನು ಕಂಡು ಶಾರದೆ–ಅಮ್ಮ, ಶೀನ ಮುಟ್ಟಿ ಮುಟ್ಟಿ ಕುಣಿದಾಡಿದರು. ಅಮ್ಮನ ಯೋಚನೆಯೇ ಬೇರೆ. ಸುಭದ್ರೆಯ ಹೆರಿಗೆಯಾದಾಗ ಆಕಳ ಹಾಲು ದಂಡಿಯಾಗಿ ಸಿಕ್ಕುತ್ತಲ್ಲ ಎನ್ನುವ ಸಮಾಧಾನ ಆಕೆಗೆ !

ಸಂಜೆ ಮತ್ತೊಮ್ಮೆ ತೋಟದತ್ತ ಹೋಗಿಬಂದೆ. ಗಾಳಿಗೆ ನಾಕಾರು ತೆಂಗಿನಕಾಯಿ ಉದುರಿದ್ದವು. ಅವನ್ನು ಮನೆಗೆ ತಂದೆ– ನಾಳೆ ಕೊಬ್ಬರಿ ಮಿಠಾಯಿ ಮಾಡುತ್ತೇನೆ ಬಸುರಿಗೆ ಅಂತ ಅಮ್ಮ ಹೇಳಿದಳು. ಸುರೇಂದ್ರನಿಗೆ, ಅಮ್ಮ ಹೇಳಿದ್ದಳಲ್ಲ– ಕುಳಿತು ಬರೆದು ಹಾಕಿದೆ. ಆಮೇಲೆ ಎಂದಿನಂತೆ ಶಾರದೆ–ತಿಮ್ಮರಿಗೆ ಮನೆ ಪಾಠ ಹೇಳಿಕೊಟ್ಟೆ. ಶಾರದೆಯೇನೋ ಎಲ್ಲದರಲ್ಲೂ ಮುಂದು. ಅಪ್ಪನ ಹೆಸರಿಟ್ಟ ತಿಮ್ಮ ಮಾತ್ರ ಯಾಕೋ ಸ್ವಲ್ಪ ತುಂಟ–ಉದಾಸೀನ ಪ್ರವೃತ್ತಿಯವನು. ಅವನನ್ನು ಈಗಲೇ ತಿದ್ದಬೇಕು. ಆರು ವರ್ಷದವನಾದ ಶ್ರೀನಿವಾಸನಿಗೆ ಈ ವರ್ಷವೇ ಶಾಲೆಗೆ ಸೇರಿಸಬೇಕು....

ಹೌದು, ಸಂಜೆ ಮನೆಗೆ ಬಂದಾಗ ಸುಭದ್ರೆ ಇರುವಂತಿಕೆ ಮುಡಿದು ಎಷ್ಟು ಸೊಗಸಾಗಿ ಕಾಣುತ್ತಿದ್ದಳು. ಏನೇನೋ ಯೋಚನೆ ಸುಳಿದವು. ಬರುವ ವಾರವಾದರೂ ಅರಸೀಕೆರೆಗೆ ಬಿಡುವು ಮಾಡಿಕೊಂಡು ಹೋಗಬೇಕು. ಇನ್ನೊಮ್ಮೆ ಹಾಕಿದ ಹತ್ತಿಯ ಬೆಳೆಗೆ ಗೊಬ್ಬರ ತರಲು ಮೈಸೂರಿಗೂ ಒಮ್ಮೆ ಹೋಗಿಬರಬೇಕು. ಕಳೆದ ಸಲದ ಬೆಳೆ ಮಾರಾಟ ಮಾಡಿದ ಹಣ ಹಾಗೇ ಇದೆಯಲ್ಲ, ಬ್ಯಾಂಕಿಗೆ ಹಾಕಬೇಕು....'

ಕೃಷ್ಣಸ್ವಾಮಿಗಳು ಬರೆದದ್ದನ್ನು ಓದಿ, ಡೈರಿ ಮುಚ್ಚಿಟ್ಟು ಹಾಸಿಗೆಗೆ ಹೋಗಿ ಅಡ್ಡವಾದರು. ಆಗಲೇ ನಿದ್ದೆ ಮಾಡಿಬಿಟ್ಟಿದ್ದ ಸುಭದ್ರೆಯ ಮುಖವನ್ನೇ ಒಮ್ಮೆ ನೋಡಿ, ಬೊಗಸೆ ತುಂಬಿಕೊಂಡರು.

೦ ೦ ೦

ಮಕ್ಕಳ ಪರೀಕ್ಷೆ ಮುಗಿದು ಬೇಸಗೆ ರಜೆ ಬಂತು. ಸೀತಾ ನದಿಯಿಂದ ಭಾಗೀರಥಿ ಮಗ ಗೋವಿಂದನೊಂದಿಗೆ ಮಲ್ಲಿಗೆ ಹಳ್ಳಿಗೆ ಬಂದಿಳಿದಳು.

ಸುರೇಂದ್ರ ಹೆರಿಗೆಯ ಸಮಾಚಾರ ತಿಳಿಸಿದ ನಂತರ ಬರುವನೆಂದು ತಿಳಿಸಿದಳು. ಮನೆ ತುಂಬ ಮಕ್ಕಳ ಗದ್ದಲ, ಕೇಕೆ ತುಂಬಿದವು. ಸುಭದ್ರೆಗೆ ಒಂಬತ್ತು ತಿಂಗಳು ತುಂಬಿದ್ದರಿಂದ ಓಡಾದುವುದು, ಕೆಲಸ ಮಾಡುವುದು ಕಷ್ಟವಾಗುತ್ತಿತ್ತು. ಗೋದಾವರಿಬಾಯಿಗೆ ವಿಚಿತ್ರ ಆತಂಕ. ದಿನವೂ ದೇವರ ಮುಂದೆ ಎರಡೆರಡು ನೀಲಾಂಜನಗಳನ್ನು ತುಪ್ಪದಲ್ಲಿ ಹಚ್ಚಿಟ್ಟು ಕೈಮುಗಿಯುವರು. ಬಹಳ ದಿನದ ನಂತರ ಗರ್ಭಿಣಿಯಾಗಿದ್ದಾಳೆಂದು ಹೆರಿಗೆಗಾಗಿ ಸೂಲಗಿತ್ತಿಯೊಬ್ಬಳನ್ನು ಗೊತ್ತು ಮಾಡಿ ವಾರಕ್ಕೆ ಮೊದಲೇ ಮನೆಯಲ್ಲಿ ತಂದು ಕೂಡಿಸಿದ್ದರು ಅವರು ! ಮಕ್ಕಳಂತೂ ಈ ಮನೆಗೊಂದು ಪಾಪು ಬರ್ತ್ತದೆ ಎಂದು ಹೇಳಿದ್ದರಿಂದ ಪ್ರತಿದಿನ ಬೆಳಿಗ್ಗೆ–ಸಂಜೆ–ಮಧ್ಯಾಹ್ನ ಅಜ್ಜಿಯ ಬಳಿ ಬಂದು ಬಂದು ಪಾಪುವಿನ ಬಗ್ಗೆ ಕೇಳುವವು.

ಅಂಥ ಚೈತ್ರ ಮಾಸದ ನಡುಹಗಲಿನ ಒಂದು ಮಧ್ಯಾಹ್ನ ಆ ಮೂರು ಮಕ್ಕಳು ಆಡಿಕೊಳ್ಳಲು ಕೆಂಜಿಗೆ ಮರದ ತೋಟಕ್ಕೆ ಹೋಗಿದ್ದರೆ–ಕೃಷ್ಣ ಸ್ವಾಮಿಗಳು ಮಲ್ಲಿಗೆ ಹಳ್ಳಿಯ ಒಕ್ಕಲು ಕುಟುಂಬದವರೊಬ್ಬರ ಕೋರ್ಟಿನ ವ್ಯಾಜ್ಯಕ್ಕಾಗಿ ಅಂದು ನಸುಕಿಗೇ ಅರಸೀಕೆರೆಗೆ ಹೋಗಿದ್ದರು. ಹಾಗೆಯೇ ಹಿಂದೆ ಎರಡು ಸಲವೂ ಹತ್ತಿ ಮಾರಿದ ಹಣವನ್ನು ಬ್ಯಾಂಕಿನಲ್ಲಿ ಜಮಾ ಮಾಡಿ ಬಂದರಾಯಿತು ಎಂಬುದು ಅವರ ವಿಚಾರವಾಗಿತ್ತು. ಆದರೆ ಅರಸೀಕೆರೆಯಲ್ಲಿ ಕೋರ್ಟಿನ ದಾವೆ ಇವರು ಅರಿತಿರದಂತಹ ತಿರುವೊಂದನ್ನು ಪಡೆಯಿತು. ಜಪ್ತಿ ಹಾಕಿದ್ದ ಒಕ್ಕಲಿನವನು ಹೊಲವನ್ನು ಕಂತುಕಟ್ಟಿ ಬಿಡಿಸಿಕೊಂಡು ಹೋಗಬಹುದೆಂದು ಕೋರ್ಟು ನ್ಯಾಯ ಬರೆದಿತ್ತು. ಒಕ್ಕಲಿನವನು ಕಕ್ಕಾವಿಕ್ಕಿಯಾದ. ಅವನಾದರೂ ಕೋರ್ಟಿನ ದಾವೆ ಮುಂದಕ್ಕೆ ಹಾಕುತ್ತಾರೆ. ಸಮಸ್ಯೆ ಬಗೆಹರಿಯಲು ಇನ್ನೂ ವರ್ಷವಾದರೂ ಹಿಡಿದಾತು ನೋಡುವಾ ಎಂದು ಕಿಸೆಯಲ್ಲಿ ಬಸ್ಸಿನ ಚಾರ್ಜಿನಷ್ಟು ದುಡ್ಡು ತುರುಕಿಕೊಂಡು ಬಂದವನು. ಈಗ ಏಕಾಏಕಿ ಹಣಕಟ್ಟಿ ಜಮೀನು ಬಿಡಿಸಿಕೊಂಡು ಸಾಗುವಳಿ ಮಾಡುವುದು ಇರುವ ಜತೆ ಎತ್ತುಗಳನ್ನು ಮಾರಿಬಿಟ್ಟದ್ದ ಅವನಿಗೆ ಸಾಧ್ಯವೂ ಇರಲಿಲ್ಲ. ಕೋರ್ಟು ಮುಗಿಯಲು ಸಂಜೆಯವರೆಗೆ ವೇಳೆಯಿತ್ತು. ಮಧ್ಯಾಹ್ನ ಊಟಕ್ಕೆಂದು ಹೋಟಲ್ಲಿಗೆ ಹೋದಾಗ– 'ನೀವೇ ಏನಾರ ಮಾಡಿ ಸ್ವಾಮಿಗಳೇ....' ಅಂದ ಅವನು. ಮಲ್ಲಿಗೆ ಹಳ್ಳಿಯವನೇ ಆದ ಆ ಒಕ್ಕಲಿಗನಿಂದ

ಸುಲಭದಲ್ಲಿ ಕೈತೊಳೆದುಕೊಳ್ಳುವಂತೆಯೂ ಇರಲಿಲ್ಲ. 'ನಾನೇನು ಮಾಡಲೊ ? ನೀನೇ ಹೇಳು. ನಿನ್ನ ಬಾಕಿ ಆರು ಸಾವಿರದಷ್ಟಿದೆ. ಅಷ್ಟು ಹಣ ನಿನಗೆ ಸಾಲ ಕೊಡೋಣವೆಂದರೆ ನೀನೋ ಶುದ್ಧ ಅಪಾಪೋಲಿ. ಬೇಸಾಯ ಮಾಡೋದು ಬಿಟ್ಟು ಜಂಗಮನ ಥರಾ ಊರೂರು ಅಲೆಯೋನು. ಬೇಸಾಯ ಮಾಡಿದ್ದರೆ ಈ ಗತಿ ಬರ್ತಿತ್ತ ?' ಅಂದರು. ಅದಕ್ಕೆ ಆ ಒಕ್ಕಲಿನವ– 'ಅಯ್ಯ, ಬಿಡಿ ಸ್ವಾಮೇರ, ಬೇಸಾಯ ಮಾಡಿದೋನು ಯಾವನು ಉದ್ಧಾರಾ ಆಗವನೆ ? ಒಂದ್ ಕೆಲ್ಸ ಮಾಡಿ– ಕೋರ್ಟಿನ ಬಾಕಿನೆಲ್ಲ ನೀವ ತೀರ್‍ಸಿ ಬಿಡಿ. ಕೈಮ್ಯಾಕೆ ಎರಡು ಸಾವಿರ ಕೊಟ್ಟು ಜಮೀನನ್ನ ನಿಮ್ಮ ಹೆಸರಿಗೆ ಬರ್‍ಕೊಳ್ಳಿ....' ಅಂದ.

ಕೃಷ್ಣಸ್ವಾಮಿಗಳು ಬಾಯಲ್ಲಿಟ್ಟುಕೊಳ್ಳಲು ಹಿಡಿದ ತುತ್ತನ್ನು ಮರಳಿ ತಟ್ಟೆಗೆ ಹಾಕಿ ಯೋಚನೆಗೀಡಾದರು. ಅವರು ಸಂದಿಗ್ಧಕ್ಕೆ ಸಿಲುಕಿದ್ದರು. ಜಮೀನು ಬಿಡಿಸಿಕೊಂಡರೆ ಜನ ಏನೆಂದುಕೊಂಡಾರು ? ಪರಾಸ್ತಿಯನ್ನು ಅನ್ಯಾಯವಾಗಿ ಕಳೆದ ಹಾಗಾಗುತ್ತದಾ ? ಇತ್ಯಾದಿ ನೈತಿಕ ಪ್ರಶ್ನೆಗಳು ಅವರನ್ನು ಕಾಡಿದವು. ಹೀಗೆ ಯೋಚಿಸುತ್ತ ಕುಳಿತ ಕೃಷ್ಣಸ್ವಾಮಿಗಳನ್ನು ಖಾನಾವಳಿಯ ರುಕುಮಾಯಿ ಗಮನಿಸಿ, 'ಯಾಕ ಸಾವ್ಕಾರ್‍ರ – ಚಿಂತೀ ಮಾಡಾಕ ಹತ್ತೀರಲ್ಲ ?' – ಎಂದು ಹತ್ತಿರ ಬಂದು ಕೇಳಿದಳು. ಕೃಷ್ಣಸ್ವಾಮಿಗಳಿಗೆ ಇದ್ದಕ್ಕಿದ್ದ ಹಾಗೆ ತುಸು ನಿರಾಳವೆನಿಸಿತು. ಯಾವುದೋ ಆಸರೆ ಸಿಕ್ಕಂತೆನಿಸಿತು. ಮಲ್ಲಿಗೆಹಳ್ಳಿ ಬಿಟ್ಟು ಬೇರೆ ಊರಿಗೆ ಹೋದರೆ ಅನಿವಾರ್ಯವಿದ್ದರೆ ಮಾತ್ರ ಹೋಟೆಲುಗಳಲ್ಲಿ ಊಟ ಮಾಡುತ್ತಿದ್ದ ಕೃಷ್ಣಸ್ವಾಮಿಗಳು ಅರಸೀಕೆರೆಗೆ ಬಂದರೆ ಮಾತ್ರ ರುಕುಮಾಯಿಯ ರೊಟ್ಟಿ–ಚಟ್ನಿ ತಿನ್ನದೆ ಎಂದೂ ಹೋದವರಲ್ಲ. ಆಕೆ ಬಂದು ಇವರ ತಳಮಳ ಗಮನಿಸಿ ಕಾರಣ ವಿಚಾರಿಸಿದಾಗ –ಇರುವ ಸಮಾಚಾರ ತಿಳಿಸಿ, ತಮಗನಿಸುತ್ತಿರುವುದನ್ನು ಹೇಳಿದರು. ಅಷ್ಟಕ್ಕೆ ಒಕ್ಕಲಿಗ '—ಅಯ್ಯ, ತಗೀರಿ ಸ್ವಾಮೇರ, ಅಂದವರೇನು ಇಲ್ಲಿ ಬಂದು ದುಡ್ಡು ಕಟ್ಟಾಕಿಲ್ಲ. ನನ್ನ ಆಸ್ತಿ, ನನ್ನ ಇಷ್ಟ ಬಂದಂಗ ಮಾರ್‍ಕಂತೀನಿ— ನೀವ್ಯಾಕೆ ತಲೆ ಕೆಡ್ಸಿಕಂತೀರಿ....' ಅಂದ. ರುಕುಮಾಯಿ— 'ಅವನs ಅಷ್ಟ ಹೇಳಿದ ಮ್ಯಾಲ ನಿಮಗs ಅಂಜಿಕೀ ಯಾಕ, ಭೂಮಿತಾಯಿ ಕೈಚಾಚಿ ಬರೂ ಮುಂದಾಗ ಒಲ್ಲೆ ಅನಬಾರ್‍ದು. ತಗೊಂಡs ಬಿಡ್ರ್ಯಲ್ಲ....' ಎಂದು ಸಲಹೆ

ಕೊಟ್ಟಳು. ಕೃಷ್ಣಸ್ವಾಮಿ ಮತ್ತೊಮ್ಮೆ ಯೋಚಿಸಿದರು. ಊಟ ಮುಗಿಸಿ– 'ಸರಿ, ನಡಿಯಪ್ಪ ಎಲ್ಲ ಹೇಗೆ ನಡೆಸುತ್ತದೋ ಹಾಗೆ ನಡೆಯೋಣ– ತಡ ಆದ್ರೆ ಕೋರ್ಟು ಮುಚ್ಚುತ್ತೆ. ಇವತ್ತೆ ದುಡ್ಡು ಕಟ್ಟಿ ಬಿಡೋಣ. ಹೇಗಿದ್ರೂ ಬೇರೆ ಕಾರಣಕ್ಕೆ ತಂದ ಹಣ ಇದೆಯಲ್ಲ' —ಎಂದು ಒಕ್ಕಲಿಸವನೊಂದಿಗೆ ಕೋರ್ಟಿನತ್ತ ನಡೆದರು.

ಕೋರ್ಟಿನ ಕೆಲಸ ಮುಗಿದದ್ದೇ ಅವಸರದಿಂದ ವಿಷಯ ತಿಳಿಸಲು ಕೃಷ್ಣ ಸ್ವಾಮಿಗಳು ಮಲ್ಲಿಗೆಹಳ್ಳಿಗೆ ಬಂದು ತಮ್ಮ ಮನೆಯ ಮೆಟ್ಟಲು ತುಳಿದರೆ, ಅಲ್ಲೇನು ? ಗೋದಾವರಿಬಾಯಿ, ಭಾಗೀರಥಿ, ಉಸಿರು ಬಿಡದೆ ಅವರಿಗೆ ಮುಗಿಬಿದ್ದರು. ಮಕ್ಕಳು ಸುತ್ತುಗಟ್ಟಿ ಹೋ ಎಂದು ಗದ್ದಲ ಮಾಡಿದವು. 'ಏನು ? ಏನು ಸಮಾಚಾರ ?'—ಎಂದು ಕೃಷ್ಣಸ್ವಾಮಿಗೆ ಕೇಳಲು ಸಹ ಪುರುಸೊತ್ತು ಕೊಡದೆ ಮಕ್ಕಳು– 'ಅಪ್ಪಾ, ಪಾಪು ಬಂದದೆ' ಎಂದು ಅರಚಿದವು. ಗೋದಾವರಿಬಾಯಿ ಮಕ್ಕಳನ್ನು ಆಚೆಗೆ ಬಿಡುವಂತೆ ಭಾಗೀರಥಿಗೆ ಹೇಳಿ, 'ಅವನಿಷ್ಟು ಸುಧಾರಿಸಿಕೊಳ್ಳಲಿ ಬಿಡ್ರೋ'– ಎಂದು ಮಗನನ್ನು ಕೈ ಹಿಡಿದು ಬಚ್ಚಲಿಗೆ ಕರೆದೊಯ್ದು ಕಾಲಿಗಷ್ಟು ನೀರು ಹಾಕಿದರು. ಕೃಷ್ಣ ಸ್ವಾಮಿಗೆ ಈಗಾಗಲೇ ಅಸ್ಪಷ್ಟವಾಗಿ ವಿಷಯ ತಿಳಿದಿದ್ದರೂ 'ಏನೇ ಅಮ್ಮ ?' ಸಹಜವಾಗಿ ಕೇಳಿದರು. ಗೋದಾವರಿಬಾಯಿ ಕಾಲು ಒರೆಸಿಕೊಳ್ಳಲು ಅಂಗ ವಸ್ತ್ರ ಕೊಡುತ್ತ.... 'ಸುಭದ್ರೆಗೆ ಹೆರಿಗೆಯಾಯ್ತೋ, ಹೆಣ್ಣು ಮಗು ಬೆಳ ದಿಂಗಳ ಹಾಗಿದೆ— ಮಧ್ಯಾಹ್ನ ಆದದ್ದು. ಏನೂ ತೊಂದರೆಯಿಲ್ಲ–' ಎಂದು ಹೇಳಿ ಮುಗಿಸಿದರು, ಅಷ್ಟು ಕೇಳಿದ್ದೇ ಕೃಷ್ಣಸ್ವಾಮಿಗಳು ಸುಭದ್ರೆ ಮಲಗಿದ್ದ ಕೋಣೆಯೆಡೆ ಹೆಜ್ಜೆ ಇಟ್ಟರು. ಕೋಣೆಯಲ್ಲಿ ತಾಯಿಯ ಪಕ್ಕ ಕಚ್ಚಿಕೊಂಡು ಮಗು ಕಣ್ಮುಚ್ಚಿ ಮಲಗಿತ್ತು. ಬೆಳ್ಳಗೆ ಹೊಳೆಯುತ್ತಿದ್ದರೂ ಮೂಗು ತುಸು ಮೊಂಡು. ಕೈಯಲ್ಲಿ ಏನೋ ಐಶ್ವರ್ಯ ಹಿಡಿದ ಹಾಗೆ ಮುಟಿಗೆ ಕಟ್ಟಿ ಭದ್ರವಾಗಿ ಹಿಡಿದುಕೊಂಡಿತ್ತು. ಕೃಷ್ಣಸ್ವಾಮಿ, ಗೋದಾ ಬಾಯಿ, ಭಾಗೀರಥಿ ಮಂಚದ ಬಳಿ ಹೋಗಿ ನಿಂತಾಗ.... ಸುಭದ್ರೆ ಆಯಾಸ ದಲ್ಲಿ ಮುಚ್ಚಿದ್ದ ಕಂಗಳನ್ನು ನಿಧಾನಕ್ಕೆ ತೆಗೆದು ನೋಡಿದಳು. ಮೂವರೂ ನಕ್ಕರು. ಗಂಡ–ಹೆಂಡತಿಯನ್ನು ಒಳಗೆಬಿಟ್ಟು ಗೋದಾವರಿಬಾಯಿ, ಭಾಗೀ ರಥಿ ಹೊರ ಹೋದರು. ಕೃಷ್ಣಸ್ವಾಮಿ ಮಂಚದ ಮೇಲೆ ಕುಳಿತು ಸುಭದ್ರೆಯ

ಕೈಗಳನ್ನು ಕೈಯಲ್ಲಿ ತೆಗೆದುಕೊಂಡು ಮೆದುವಾಗಿ ಅದುಮಿದರು. ಐವತ್ತರ ಸನಿಹದ ವಯಸ್ಸಿನಲ್ಲಿ ತಮ್ಮ ಬದುಕಲ್ಲಿ ಹೊಸ ಚೈತ್ರನಂತೆ ಬಂದ ಮಗುವ ನ್ನೊಮ್ಮೆ ಆರ್ದ್ರವಾಗಿ ನೋಡಿದರು. ಅದರ ಎಳೆಗಲ್ಲದ ಮೇಲೆ ಬೆರಳು ಆಡಿಸಿದರು. ಅಪರಿಚಿತ ಸ್ಪರ್ಶಕ್ಕೆ ಮಗು ಒಮ್ಮೆ ಬೆಚ್ಚಿ, ಮೈಯಲುಗಿಸಿ ಮತ್ತೆ ನಿದ್ದೆ ಮಾಡಿತು. ಕೃಷ್ಣಸ್ವಾಮಿ ಸುಭದ್ರೆಯನ್ನೇ ನೋಡುತ್ತ ಅಂದರು : 'ಈ ಮೂಗಿಲ್ಲದ ಹುಡುಗಿಯ ಅದೃಷ್ಟ ನೋಡಿದೆಯೇನೆ, ಈ ನೆಲಕ್ಕೆ ಬರುವಾಗ ಹೊಸ ನೆಲವನ್ನೂ ತಂದಿದಾಳೆ'–ಎಂದು, ಅರಸೀಕೆರೆಯಲ್ಲಿ ನಡೆದದ್ದೆಲ್ಲ ಹೇಳಿದರು. ಗಂಡ–ಹೆಂಡತಿ ಇಬ್ಬರೂ ನಿದ್ದೆಯಲಿ ಮುಳುಗಿದ್ದ ಮಗುವಿನ ಕೆನ್ನೆಯನ್ನು ಮತ್ತೊಮ್ಮೆ ನಿಧನಿಧಾನಕ್ಕೆ ಹಿಂಡಿದರು.

o o o

ಅಂದು ಸಂಜೆ ಮಲ್ಲಿಗೆಹಳ್ಳಿ ಒಕ್ಕಲಗೇರಿಯಿಂದ ವಸಂತೋತ್ಸವದ ಮೆರವಣಿಗೆ ಹೊರಟಿತು. ಹಳ್ಳಿಯ ಪ್ರತಿ ಮನೆಯ ಹೆಣ್ಣುಗಳು ಕೊಡದಲ್ಲಿ ಹಳೆನೀರು ತುಂಬಿಕೊಂಡು, ಕೊಡವನ್ನು ಹೂ–ಅರಿಶಿಣ, ಕುಂಕುಮದಿಂದ ಸಿಂಗರಿಸಿ, ಆ ಕಾಲದ ಎಲ್ಲ ಗಿಡಗಳ ಚಿಗುರನ್ನು ಆ ನೀರಲ್ಲಿ ಇಳಿಬಿಟ್ಟು ಹೊಳೆಗೆ ಹೋಗುತ್ತಾರೆ. ತಲೆ ತುಂಬ ಮಲ್ಲಿಗೆ ಮುಡಿದ ಹೆಂಗಸರು–ಪುಟ್ಟ ಹುಡುಗಿಯರು ಹಾಗೆ ಹೊಳೆಗೆ ಹೋಗಿ ಮುಂಗಾರಿನ ಮಳೆಯಿಂದ ಹಳೆನೀರು ತೊಳೆದು, ಹೊಸನೀರು ತಂದ ಹೊಳೆಯ ನೀರನ್ನು ಮೆರವಣಿಗೆಯಲ್ಲಿ ಹೋಗಿ ತಂದು, ಆ ಹೊಸ ನೀರಿನಿಂದ ಹಳ್ಳಿಯ ಚನ್ನಕೇಶವನ ಗುಡಿಯನ್ನು ಪೂರ್ತಿ ತೊಳೆಯುತ್ತಾರೆ. ಆ ದಿನ ಹಳ್ಳಿಯ ಮನೆಮನೆಗೂ ಹಬ್ಬದ ಸಂಭ್ರಮ. ಕೃಷ್ಣಸ್ವಾಮಿಯ ಮನೆಯಿಂದ ಶಾರದೆ ಬಿಂದಿಗೆ ಹೊತ್ತು ಹೋದರೆ ಆಕೆಯ ಹಿಂದೆ ತಿಮ್ಮಪ್ಪ ನರಸಿಂಹ– ಗೋಪಿಂದ, ಶೀಸ ಹೊರಟರು.

o o o

ಆ ದಿನ ಕೃಷ್ಣಸ್ವಾಮಿ ತಮ್ಮ ಡೈರಿಯಲ್ಲಿ ಬರೆದರು—

'ಇವತ್ತು, ವೈಶಾಖ ಮಾಸದ ತದಿಗೆ. ಒಂದೇ ದಿನದಲ್ಲಿ ಊಹಿಸದ ಏನೆಲ್ಲ ನಡೆಯಿತು. ಬೆಳಿಗ್ಗೆ ಅರಸೀಕೆರೆಗೆ ಬಸ್ಸು ಹತ್ತುವಾಗ ಇಂಥದ್ದು ನಡೆದೀತು ಎಂದು ಕನಸಿರಲಿಲ್ಲ ಸಹ. ಮನಸ್ಸು ಆ ಕ್ಷಣದಲ್ಲಿ ಏನೂ ನಿರ್ಧರಿಸಲಾಗದೇ ತೂಗುಯ್ಯಾಲೆಯಲ್ಲಿತ್ತು. ಬಹುಶಃ ರುಕುಮಾಯಿ ಬಂದು ಹೇಳಿರದಿದ್ದರೆ ನಾನು ಈ ಜಪ್ತಿ ಜಮೀನನ್ನು ಬಿಡಿಸಿಕೊಂಡು ಸಾಗುವಳಿ ಮಾಡುವ ನಿರ್ಧಾರಕ್ಕೆ ಬರುತ್ತಲೇ ಇರಲಿಲ್ಲವೇನೋ. ಆದರೆ ಕೋರ್ಟಿನಲ್ಲಿ ಹಣಕಟ್ಟಿ, ಒಕ್ಕಲಿಗನ ಕೈಯಲ್ಲಿ ತುಸು ಜಾಸ್ತಿಯಾದರೂ ಹಿಂದುಮುಂದು ನೋಡದೆ ಎರಡು ಸಾವಿರ ಕೊಟ್ಟಿದ್ದಕ್ಕೆ ಖೇದವೇನೂ ಅನಿಸಲಿಲ್ಲ. ಅದೇನು ಪಾಳು ನೆಲವಲ್ಲ. ಸರಿಯಾಗಿ ಸಾಗುವಳಿ ಮಾಡಿದರೆ ಏನೆಲ್ಲ ಬೆಳೆ ತೆಗೆಯಬಹುದು. ಹೊಲದಲ್ಲೇ ಹುದುಲು ತುಂಬಿಕೊಂಡ ಬಾವಿಯೊಂದಿದೆಯಂತೆ- ಹುದುಲು ತೆಗೆಸಿದರೆ ಸರಿ ಹೋದೀತು. ಇವತ್ತು ಹುಟ್ಟಿದ ಮಗು ಸಹ ಎಂಥ ಅದೃಷ್ಟದ್ದು ! ಬಣ್ಣ, ಕಣ್ಣು ಎಲ್ಲ ಅಮ್ಮನ ಹಾಗೆ. ಆದರೆ ಮೂಗು ಮಾತ್ರ ಅರಸೀಕೆರೆಯ ರೈಲು ಹೋದ ಹಾಗೆ ತುಸು ಮೊಂಡು. 'ಮುಂದೆ ಬೆಳೆಯುತ್ತದೋ ಏನೋ ಈಕೆ ಬಹಳ ಚಾಲಾಕಿಯಾಗ್ತಾಳೆ. ಎಲ್ಲರ ಮನಸ್ಸು-ಎತ್ತರ ಮೀರಿ ಬೆಳೀತಾಳೋ, ಜಾಣ ಹುಡುಗಿ ಇದು. ಜಾಣೆ ಅಂತಾನೆ ಕರೀರಿ ಈ ಮೊಂಡು ಮೂಗಿನ ಮಗುಗೆ'- ಅಂತ ಅಮ್ಮ ಅಂದಳು. ಯಾಕೋ ತನಗೂ ಆ ಮಗುವನ್ನು ನೋಡಿದಾಗ ಹಾಗೇ ಅನಿಸಿತು.

ಸಂಜೆ ಊರ ಹೆಣ್ಣು ಮಕ್ಕಳೆಲ್ಲ ಜಾತ್ರೆಯಲ್ಲಿ ಹೋಗಿ ಹೊಸ ನೀರು ತರುವಾಗ ಶಾರದೆಯೂ ಹೋಗಿದ್ದಳಲ್ಲ. ಎಷ್ಟು ಬೆಳೆದಿದ್ದಾಳೆ ಈ ಚಿಕ್ಕ ವಯಸ್ಸಿಗೇನೆ ಹುಡುಗಿ ಅನಿಸಿತು. ಅದೇ ಸಮಯಕ್ಕೆ ಹೊಸ ನೀರಂತೆ ಇನ್ನೊಂದು ಪುಟ್ಟ ಹುಡುಗಿಯೂ ಈ ಮನೆಗೆ ಬಂದಿದಾಳಲ್ಲ ಈಕೆಗೆ 'ಭೂದೇವಿ' ಅಂತ ಯಾಕೆ ಹೆಸರಿಡಬಾರದು ಅನಿಸಿತು. ಹುಟ್ಟುವಾಗಲೇ ಈ ಜಾಣೆ ಭೂಮಿಯನ್ನೂ ಜತೆಯಲ್ಲೇ ತಂದಿದಾಳಲ್ಲ. ಹಾಗಂತ ರಾತ್ರಿ ಅಮ್ಮ-ಸುಭದ್ರೆಗೆ ಹೇಳಿದೆ. ಇಬ್ಬರೂ ಖುಷಿಯಲ್ಲಿ ಒಪ್ಪಿದರು. ಹೌದು, ನಾಮಕರಣಕ್ಕೆ ಬನ್ನಿ ಎಂದು ಸುಭದ್ರೆಯ ಅಪ್ಪ-ಅಮ್ಮರಿಗೆ, ಸುರೇಂದ್ರನಿಗೆ ಪತ್ರ ಬರೆಯಬೇಕು. ಪಾಪ, ಅವರಿಗೂ ಅಮ್ಮನಂತೆ ವಯಸ್ಸಾಗಿದೆ. ಪ್ರಯಾಣ

ಕಷ್ಟ. ಒಬ್ಬಳೇ ಮಗಳ ಇನ್ನೊಂದು ಪೊಮ್ಮಗುವನ್ನು ಅವರೂ ನೋಡಲಿ. ಅವರನ್ನು ಹುಷಾರಾಗಿ ಕರೆತರಲು ಬೇಸಾಯದ ಕಾಡಜ್ಜನನ್ನು ಕಳಿಸಬೇಕು. ಅವನೂ ಈ ಮನೆಯ ಸಾಕು ಮಗ ತಾನೇ !

o o o

ಭೂದೇವಿ ಎಂಬ ಆ ಹೆಸರಿನ ಮಗು ಬೆಳೆಯತೊಡಗಿತು. ಆ ಮಗುವಿನ ದುಂಡನೆಯ ಬೆಳದಿಂಗಳಿನಂಥ ಮುಖ ; ನಯವಾದ ಕೆನ್ನೆಗಳು ನಂದಾದೀಪದ ಹಾಗೆ ಪ್ರಶಾಂತತೆ ತುಂಬಿಕೊಂಡ ಬಟ್ಟಗಲ ಕಂಗಳು ; ಮಾಟವಾದ ತುಟಿಗಳು, ಆ ತುಟಿಗಳಿಗೂ–ತುಸು ಮೊಂಡು ಮೂಗಿಗೂ ನಡುವೆ ಒಂದು ಪುಟ್ಟ ಗೀಟು, ಅದರ ಪಕ್ಕ ಚಿಕ್ಕ ಕಪ್ಪು ಚುಕ್ಕೆ ನಕ್ಷತ್ರ, ಕೆಂಪನೆ ಮಿಂಚು ಕಿವಿಗಳು ದಿನದಿನವೂ ತುಸುತುಸು ದೊಡ್ಡವಾಗಿ ಬೆಳೆಯತೊಡಗಿ ; ಅದು ಕೂತು ನಕ್ಕು, ಅದು ನಿಂತು ನಕ್ಕು, ಬೊಕ್ಕಬೋರಲಾಗಿ ಬಿದ್ದು ಅತ್ತು, ಕುಡಿಯಲು ಪೊಲೆತೊಟ್ಟು ಸಿಗದಾದಾಗ ಎರಡೂ ಕಿವಿಗಳನ್ನು ಪರಚಿಕೊಳ್ಳುತ್ತ ಉಸಿರುಗಟ್ಟುವ ಹಾಗೆ ಅತ್ತು ; ಹತ್ತುಹನಿ ನೀರು ಹನಿಸಿ, ಹಾಲುಕ್ಕಿ ಹರಿದದ್ದೇ ಹಲ್ಲಿಲ್ಲದ ಬಾಯಲ್ಲಿ ಯಾರಿಗೂ ಅರ್ಥವೇ ಆಗದ ಭಾಷೆಯಲ್ಲಿ ಅವರೊಡನೆ ಮಾತಾಡಿ ಅವರನ್ನೂ ನಗಿಸಿ– ಹೀಗೆ ; ಆ ಭೂದೇವಿ ಬೆಳೆದು–ಎಲ್ಲರೂ ಜಾಣೆ, ಜಾಣೆ ಅಂತ ಕರೆದು.... ಅಪ್ಪ, ಅಮ್ಮ, ಅಜ್ಜಿಯರಿಗೆ ತಾನು ಮಲಗಿದಾಗ ಕೈಮುಟಿಗೆಯಿಂದ ಗಾಳಿಯಲ್ಲಿ ಅಲುಗಿಸಲುಗಿಸಿ ಏನೋ ಬರೆದು–ಅದರೊಂದಿಗೆ ತಾನೂ ಬೆಳೆದು ಆಶ್ಚರ್ಯ ಹುಟ್ಟಿಸುವಳು.

ಈ ಮಗು ಹೀಗೆ ಬೆಳೆಯುತ್ತಿದ್ದರೆ ಕೃಷ್ಣಸ್ವಾಮಿಗಳು ಆ ಮಗುವಿನೊಂದಿಗೆ ಕೊಂಡುತಂದ ಭೂಮಿಯನ್ನು ನಾಕಾರು ಆಳುಗಳನ್ನು ಹಚ್ಚಿಸಿ ಪಸನು ಮಾಡಿಸಿದರು. ಬಾವಿಯಲ್ಲಿದ್ದ ಹುದುಲನ್ನು ತೆಗೆಸಿ ಅದರಲ್ಲಿ ತಿಳಿ ನೀರನ್ನು ಮೊಗೆದು ತೆಗೆದರು. ಭೂಮಿಯೇನೋ ಹಸನಾಗಿ ಮೈತೆರೆದು ಕೊಂಡು ನಿಂತಿತ್ತು. ಅವರಿಗೀಗ ಏನು ಬೆಳೆಯಬೇಕೆಂದು ಯೋಚನೆ ಹತ್ತಿತ್ತು. ಈಗಾಗಲೇ ಮೊದಲೇ ಇದ್ದ ಜಮೀನಿನಲ್ಲಿ ಅಕ್ಕಡಿ ಕಾಳುಕಡಿ ಬೆಳೆಯುತ್ತಿದ್ದರು. ಹತ್ತಿ ಬೆಳೆ ತೆಗೆದಿದ್ದರು. ಈ ಹೊಸ ಜಮೀನಿನಲ್ಲಿ

ಮಾರುಕಟ್ಟೆಯಲ್ಲಿ ಮಾರದಂಥ ಮನೆಯಲ್ಲಿನ ಎಲ್ಲರೂ ಕೂತುಣ್ಣುವಂತಹ ಬೆಳೆ ಬೆಳೆಯಬೇಕೆಂದು ಅವರ ಆಸೆ. ಮೊದಲು ಕಾಡಜ್ಜ–ದನಿಯರೊಂದಿಗೆ ಮಾತಾಡಿ, ಆಮೇಲೆ ಗೋದಾವರಿಬಾಯಿಗೂ 'ಅಮ್ಮ ಭೂದೇವಿ ಹೊಲದಲ್ಲಿ ಏನೇ ಬೆಳೆಯುೂದು' ಅಂತ ಕೇಳಿ ನೋಡಿದರು. 'ಹೇಗಿದ್ದರೂ ವರ್ಷಕ್ಕಾಗುವಷ್ಟು ಕಾಳು–ಕಡಿ ಈಗಾಗಲೇ ಬೆಳೀತಿದಿಯಲ್ಲೋ. ಇದರಲ್ಲಿ ರಾಗಿನೋ–ಗೋದಿಯನ್ನೋ ಯಾಕೆ ಬೆಳಿಬಾರದು ?' ಎಂದು ಗೋದಾವರಿಬಾಯಿ ಹೇಳಿದರು. ಇವೆರಡು ಕೃಷ್ಣಸ್ವಾಮಿಯ ಮನಸ್ಸಿನಲ್ಲಿಯೇ ಇದ್ದುದರಿಂದ 'ಒಂದು ಮಳೆ ಬೀಳಲಿ ಮತ್ತೆ ಬೀಜ ಉದುರಿಸುವಾ' ಅಂದುಕೊಂಡರು.

ಹೀಗೆಯೇ—

ಒಂದು ಮುಂಗಾರು, ಎರಡು ಮುಂಗಾರು ಕಳೆದವು. ಮೂರು ಹಿಂಗಾರು ಕಳೆದವು.

ಗೋದಾವರಿಬಾಯಿಯ ಕಣ್ಣಿಗೆ ಬೆಳೆದ ಹೂ ಮತ್ತಷ್ಟು ಬಿಳಿಯಾಗಿ ಕಣ್ಣು ಮತ್ತೂ ಮಂಜಾದವು.

ತಿಮ್ಮಪ್ಪ ನರಸಿಂಹಪ್ರಸಾದ ಏಳನೆಯ ಕ್ಲಾಸಿಗೆ ಮುಟ್ಟಿದ್ದ.

ಶಾರದೆ ಐದನೆಯ ಕ್ಲಾಸಿಗೆ ಹೋಗುವ ತಯಾರಿಯಲ್ಲಿದ್ದಳು.

ಶ್ರೀನಿವಾಸ ಎರಡನೆ ಕ್ಲಾಸಿಗೆ.

ಭೂದೇವಿಯ ಹೊಲ ಆಗಲೇ ಮೂರು ಬೆಳೆಯನ್ನು ತೆಗೆದು ಮತ್ತೆ ಹೊಸ ಬೆಳೆಗೆ ಮೈತೆರೆದು ವರ್ಷವೂ ನಿಲ್ಲುತ್ತಿತ್ತು.

ವರ್ಷಗಳ ಹಿಂದೆ ನೆಟ್ಟ ತೆಂಗಿನ ಮರಗಳು ಫಲತೂಗಿ ತೊನೆದವು.

ಕೃಷ್ಣಸ್ವಾಮಿಗಳು ಭೂದೇವಿ ಮೂರು ಚೈತ್ರ ದಾಟಿದಾಗ ಐವತ್ತೂ ರಕ್ಕೆ ಕಾಲಿಟ್ಟರು.

ಈ ಮಧ್ಯೆ ಕೃಷ್ಣಸ್ವಾಮಿಗಳ ಬದುಕಲ್ಲಿ ಅತಿಮುಖ್ಯ ಎರಡು ಘಟನೆ ನಡೆದವು. ಮೊದಲನೆಯದು— ಕಾಲಾನುಕ್ರಮದಲ್ಲಿ ಬಿಚ್ಚಿಕೊಳ್ಳಲಿದ್ದರೆ, ಇನ್ನೊಂದು ಕೃಷ್ಣಸ್ವಾಮಿಗಳ ಮದುವೆಯಾದ ದಿನ ಸಂಜೆಗತ್ತಲಲ್ಲಿ ಅಣ್ಣನಿಂದ ಐನೂರು ಇಸಿದುಕೊಂಡು ಹೊರಟುಹೋಗಿ ಇಷ್ಟು ದಿನ ಸದ್ದುಗದ್ದಲವಿಲ್ಲದೆ ಇದ್ದ ನಾರಾಯಣ ಮರಳಿ ಮಲ್ಲಿಗೆ ಹಳ್ಳಿಗೆ ವಾಪಸ್ಸು ಬಂದಿದ್ದ !

## ಮತ್ತೆ ನಾರಾಯಣ–ತಸ್ಮೈನಮಃ

ಆವದ್ದು ಹೀಗೆ :

ಮಂಜುಗಣ್ಣನ ಗೋದಾವರಿಬಾಯಿ ಅಂದು ಭೂದೇವಿಯೊಂದಿಗೆ ಜಗುಲಿಗೆ ಕೂತು ಬಿಸಿಲಿಗೆ ಮೈಯೊಡ್ಡಿ ಕಾಯಿಸುತ್ತಿದ್ದರು. ಸುಭದ್ರೆ ಬೆಳಗಿನ ಕೆಲಸದಲ್ಲಿ ಅಡುಗೆ ಮನೆಯಲ್ಲಿದ್ದಳು. ಮಕ್ಕಳು ಹಿತ್ತಲಿನಲ್ಲಿ ಆಡುತ್ತಿದ್ದವೇನೋ. ಕೃಷ್ಣಸ್ವಾಮಿಗಳು ಪ್ರತಿದಿನ ಹೋಗುವಂತೆ ತೋಟ, ಹೊಲ, ಹೊಸ ಮನೆಯನ್ನೊಮ್ಮೆ ನೋಡಿ ಬರಲು ಹೋಗಿದ್ದರು. ಆಗಲೇ ಭೂದೇವಿ ತನ್ನ ತೊದಲು ನುಡಿಗಳಲ್ಲಿ 'ಜಿ' 'ಜಿ' ಎಂದು ಅಜ್ಜಿಗೆ ಏನೋ ಹೇಳಲು ತವಕಿಸುತ್ತಿತ್ತು. ಗೋದಾವರಿಬಾಯಿಗೇನು ಅರ್ಥವಾಗದೆ, 'ಏನೇ ಜಾಣೆ ಚೂಲೆ ನಿಂಗೇನು ಬೇಕು....' ಎಂದು ಅದರ ಶೈಲಿಯಲ್ಲಿಯೇ ಕೇಳಿದರು. ಜಾಣೆ ಮತ್ತೆ ಅಜ್ಜಿಯ ಕೈ ಹಿಡಿದಿಡಿದು ಎತ್ತಲೋ ಕೈತೋರಿಸಿತು. ಗೋದಾವರಿಬಾಯಿ ಹಣೆಗೆ ಕೈ ಕಮಾನಾಗಿ ಅಡ್ಡವಿಟ್ಟು ದಿಟ್ಟಿಸಿ ನೋಡಿದರು. ತುಸು ದೂರದಲ್ಲಿ ಮಸುಕು ಮಸುಕು ಆಕೃತಿಯೊಂದು ಕಂಡಿತು. ಚಲಿಸದೆ ತಟಸ್ಥವಾಗಿ ನಿಂತಿದ್ದ ಆಕೃತಿಯನ್ನು ಉದ್ದೇಶಿಸಿ ಗೋದಾವರಿಬಾಯಿ ಕೇಳಿದರು– 'ಯಾರಾ ಅದು ? ಕಾಡಜ್ಜನೇನೋ ?', ಅಲ್ಲಿಂದ ಉತ್ತರ ಬರದಾದಾಗ– 'ಮತ್ಯಾರೋ ದನಿಯನಾ ?' ಈಗಲೂ ಆ ಕಡೆಯಿಂದ ಉತ್ತರ ಬರದಾದಾಗ ತುಸು ಅಪ್ರತಿಭರಾಗಿ 'ಸುಭದ್ರಾ, ಆದ್ಯಾರೇ ಅಂಗಳದಲ್ಲಿ ನಿಂತಿದಾರೆ ನೋಡು ಬಾರೇ' ಎಂದು ಕೂಗು ಹಾಕಿದರು. ಆಗ ಎದುರು ನಿಂತಿದ್ದ ವ್ಯಕ್ತಿ ತುಸು ಮುಂದೆ ಬಂದು 'ಅಮ್ಮಾ ನಾನೇ' ಅಂದಿತು. ಗೋದಾವರಿಬಾಯಿಗೆ ಎದೆಯಲ್ಲಿ ಝಳಕಿದಂತಾಗಿ 'ನಾನು ಅಂದ್ರೆ ಯಾರೋ !' ಅಂತ ಕೇಳಿದಾಗ ಅವರ ದನಿಯಲ್ಲಿ ವಿಚಿತ್ರ ಮಾರ್ದವತೆ ತುಂಬಿತು. 'ನಾನು ಕಣೇ, ನಾಣಿ !' ಎಂದು ಕಂದಿದ ದನಿಯಲ್ಲಿ ಆ ವ್ಯಕ್ತಿ ಹೇಳಿದಾಗ ಅವರ ಬಾಯಿಂದ ಬಂದದ್ದು ದೊಡ್ಡ ಉದ್ಗಾರ. ಮರುಕ್ಷಣವೇ ಅಸ್ವಸ್ಥತೆ ಆವರಿಸಿ ಅವರು ಹೋ ಎಂದು ಅಳಲು ಪ್ರಾರಂಭಿಸಿಬಿಟ್ಟರು. ಎದುರಿಗೇ ನಿಂತ ನಾರಾಯಣನಿಗೆ ಏನು ಮಾಡಬೇಕು ತೋಚದೆ ಮುಂದೆ ಬಂದು 'ಅಮ್ಮ ಅಳಬೇಡವೇ, ಅಳಬೇಡವೇ' ಎಂದು ತೊದಲ ತೊಡಗಿದ. ಹೊರಗಿನ ಗದ್ದಲಕ್ಕೆ ಹಿತ್ತಲಿನಿಂದ ಮಕ್ಕಳು

ಅಡುಗೆ ಮನೆಯಿಂದ ಸುಭದ್ರೆ ಹೊರಗೋಡಿ ಬಂದರು. ಏನೊಂದೂ ತಿಳಿಯದೆ ಸ್ತಬ್ಧರಾಗಿ ನಿಂತರು. ಯಾರೋ ಅಪರಿಚಿತ ಅತ್ತೆಗೆ ಏನೋ ಮಾಡುತ್ತಿದ್ದಾನೆ ; ಮಗು ಬೇರೆ ಅಲ್ಲಿದೆ ಅನಿಸಿದ್ದೇ ಸುಭದ್ರೆ ನರಸಿಂಹನನ್ನು ಅಪ್ಪನ್ನ ಕರೆದು ತಾ ಎಂದು ತೋಟಕ್ಕೆ ಓಡಿಸಿದಳು. ಅವಳಿಗಾದರೂ ಆತ ನಾರಾಯಣ ಎಂದು ಹೇಗೆ ಗೊತ್ತಾಗಬೇಕು ? ಆತನನ್ನು ನೋಡಿದ್ದು ವರ್ಷಗಳ ಹಿಂದೆ, ಮದುವೆಯ ದಿನ ಮಾತ್ರ. ಅಂದಿನ ಚಿತ್ರವೇ ನೆನಪಿಂದ ಅಳಿಸಿ ಹೋಗಿದೆ. ಆಗೀಗ ಅತ್ತೆ– ಇವರು ಅವನ ಬಗ್ಗೆ ಹೇಳಿದ್ದರಿಂದ ಆತ ಹೀಗಿದ್ದನೆಂದು ಊಹಿಸಿಕೊಂಡಿದ್ದಳಾದರೂ ಈಗ ನೋಡುತ್ತಿರುವ ವ್ಯಕ್ತಿ ಅದಕ್ಕೆ ತದ್ವಿರುದ್ಧವಾಗಿದ್ದಾನೆ ! ಅತ್ತೆ ಹೇಳುತ್ತಿದ್ದ ಕೆಂಚನೆಯ– ಎತ್ತರದ ನಾರಾಯಣನೆಲ್ಲಿ? ಈಗ ತನ್ನೆದುರು ಅರೆಬರೆ ಬಿಳಿಗೂದಲ ಗಡ್ಡ ; ಕೆದರಿದ ತಲೆಗೂದಲಿನ ಈ ವ್ಯಕ್ತಿಯೆಲ್ಲಿ ? ನಿಂತಲ್ಲೇ ಯೋಚಿಸಿದ ಸುಭದ್ರೆ ಧೈರ್ಯ ಮಾಡಿ ಜಗುಲಿಯತ್ತ ನುಗ್ಗಿದಳು. 'ಅತ್ತೆ, ಅತ್ತೆ, ಅಮ್ಮ' ಎಂದು ಗೋದಾವರಿಬಾಯಿಯವರನ್ನು ಅಲುಗಿಸಿ, ಭೂದೇವಿಯನ್ನು ಎತ್ತಿ ಒಯ್ದು ಒಳಗೆ ಬಿಟ್ಟು ಬಂದರು. ಸುಭದ್ರೆ ಹೊರಬಂದಾಗ ಗೋದಾವರಿಬಾಯಿ ಅಪರಿಚಿತ ವ್ಯಕ್ತಿಯ ಮೈಕೈ ಮುಟ್ಟಿ ಮುಟ್ಟಿ ನೋಡಿ ತಬ್ಬಿ, ಕಣ್ಣೀರು ಹನಿಸುತ್ತಿದ್ದರು. ಇಷ್ಟರಲ್ಲಿ –ತೋಟದಿಂದ ಕೃಷ್ಣಸ್ವಾಮಿ ಮಗನೊಂದಿಗೆ ಬೀಸಾಗಿ ನಡೆದು ಬರುತ್ತಿರುವುದು ಆಕೆಗೆ ಸಮಾಧಾನ ತಂದಿತು.

ಕೃಷ್ಣಸ್ವಾಮಿಗೆ ಏನೋ ಅನಾಹುತವಾಗಿದೆಯೆನಿಸಿತು. ತೋಟದಲ್ಲಿ ತೆಂಗಿನ ಮರದ ಬುಡಕ್ಕೆ ಕೂತು ಪಾತಿಯನ್ನು ಸರಿಯಾಗಿ ಕಟ್ಟುವಾಗ ನರಸಿಂಹ ಓಡಿಬಂದು 'ಅಪ್ಪ, ಯಾರೋ ಹುಚ್ಚ ಬಂದಾನೆ, ಅಜ್ಜೀನ ಹಿಡ್ಕಂಬುಟ್ಟಾನೆ....'ಎಂದು ಏದುಸಿರು ಬಿಡುತ್ತ ಹೇಳಿದಾಗ ಅವರು ಕಾಲಿಗೆ ಮೆಟ್ಟು ಸಹ ಹಾಕದೆ ದುರುದುರು ಓಡಿ ಬಂದಿದ್ದರು. ಕಾಲಿಗೆ ಸಿಕ್ಕುವ ಪಂಚೆಯನ್ನು ಸೊಂಟಕ್ಕೆ ಕಟ್ಟುತ್ತ ಓಡುವ ಶೈಲಿಯಲ್ಲೇ ಜಗುಲಿಗೆ ಬಂದು ನಿಂತರು. ಸುಧಾರಿಸಿಕೊಂಡರು, ಸ್ತಬ್ಧರಾದರು. ಅರೆಕ್ಷಣ ಮೂಕರಾದರು. ಆಮೇಲೆ ಅವರ ಬಾಯಿಂದ ಹೊರಬಂದ ಮಾತು– 'ನಾಣೀ, ಯಾವಾಗ ಬಂದೆಯೋ?'

ಮುಖದ ತುಂಬ ಕುರುಚಲು ಗಡ್ಡ, ಕೆದರಿದ ತಲೆ; ಬತ್ತಿ ಹೋದ ಕಣ್ಣುಗಳು, ಸೋತ ಮೈ ಬಿಟ್ಟುಕೊಂಡು ಮಲ್ಲಿಗೆಹಳ್ಳಿಗೆ ಬಂದ ನಾರಾಯಣ

ನನ್ನು ಯಾರೂ ಅವನೇಕೆ ಮದುವೆಯ ದಿನ ಹಾಗೆ ಮಾಡಿದನೆಂದು ಕೇಳಲಿಲ್ಲ. ಹಿಂದಿನದೆಲ್ಲ ಮರೆತಂತೆ, ಇದೀಗ ಅವನೂ ಈ ಮಕ್ಕಳೊಂದಿಗೆ ಈ ಮನೆಗೆ ಬಂದ ಹೊಸ ಮಗುವಂತೆ ಬರಮಾಡಿಕೊಂಡರು. ಅದೇ ದಿನ ಆತನ ವಿಕರಾಳ ಅವತಾರ, ಹರಿದ ಮೈಮೇಲಿನ ಬಟ್ಟೆ ಆಚೆ ಕಳಚಿಬಿದ್ದವು. ಗಡ್ಡ ಹೋಯಿತು. ಕೂದಲು ಒಪ್ಪವಾದವು. ಹೊಸ ಪಂಚೆ ಬಂತು. ಗೋದಾವರಿಬಾಯಿಯೇ ಎದುರು ನಿಂತು ಅವನ ತಲೆಗೆ ಎಣ್ಣೆ ಹಚ್ಚಿ ಹಂಡೆನೀರನ್ನು ಕಾಸಿ ಬೆನ್ನು ತಿಕ್ಕಿ ಸ್ನಾನ ಮಾಡಿಸಿದರು. ತೊದಲು ನುಡಿಯ ಜಾಣೆ ಅಜ್ಜಿಯ ಹಿಂದೆ ನಿಂತು ಕೊಂಡು ಅಪರಿಚಿತನನ್ನು ನೋಡೇ ನೋಡಿತು. ಅಜ್ಜಿ ತನ್ನನ್ನು ಗಮನಿಸ ದಿರುವುದಕ್ಕೆ ಮುನಿಸಿ ಕೈ ಎಳೆದು ಬಳೆ ಒಡೆಯಿತು. ಪ್ರತಿದಿನ ತಪ್ಪಿಸಿ ಕೊಂಡರೂ ಎಳೆದು ತಂದು ಮಣೆ ಮೇಲೆ ಕೂರಿಸಿ ತಲೆಗೆ ಬಿಸಿನೀರು ಸುರಿ ಯುವ ಅಮ್ಮನ ಕೈಬಳೆ ಎಳೆದು ಒಡೆಯುವುದೆಂದರೆ ಆ ಜಾಣೆಗೆ ಖುಷಿಯ ಆಟ.

ನರಸಿಂಹ–ಶಾರದೆ, ಶೀನರಿಗೆ, ನಾಣೀ ಚಿಕ್ಕಪ್ಪ ಆತನ ಮೌನದಿಂದ, ಅವನತ್ತ ನೋಡಿದಾಗ ನಗುತ್ತಿದ್ದ ಮುಗುಳು ನಗೆಯಿಂದ ಇಷ್ಟವಾದ. ಸುಭದ್ರೆ ಗಂತೂ ಮದುವೆಯಾಗಿ ಬಂದಂದಿನಿಂದ ಗಂಡ–ಅತ್ತೆಯರನ್ನು ಬಿಟ್ಟು ಬೇರೆ ಯಾರೂ ಇಲ್ಲದ ಈ ಮನೆಗೆ ನಾರಾಯಣ ಬಂದದ್ದು ತುಸು ಮುಜುಗರ. ಆದರೂ ಭಾವನಿಗೆ ವಿಶೇಷ ಅಡುಗೆ– ಆತ ಕುಳಿತಲ್ಲಿ, ನಿಂತಲ್ಲಿ ಏನು ಕೇಳ ಬಹುದೋ ಎಂದು ಊಹಿಸುತ್ತ ಆತ ಕೇಳಿದ್ದನ್ನು, ಕೇಳಬಹುದಾದದ್ದನ್ನು ಪೂರೈಸಲು ಯತ್ನಿಸುವಳು. ಗೋದಾವರಿಬಾಯಿಗಂತೂ ಎಷ್ಟೊಂದು ಖುಷಿಯಾಗಿತ್ತೆಂದರೆ ನಾರಾಯಣ ಬಂದ ದಿನ ಆ ಖುಷಿಯಲ್ಲಿ ಅವರು ಸಂಜೆ ಹಾಲು ಸಹ ಕುಡಿಯದೆ ಮಲಗಿದರು. ಕೃಷ್ಣಸ್ವಾಮಿಗಳಿಗೆ ಮನಸ್ಸು ಹಗುರ ವೆನಿಸಿತು. ಬದುಕಿರುವವರೆಗೂ ಅಮ್ಮ ಕೊರಗುವುದು ತಪ್ಪಿತೆಂದು ತೃಪ್ತಿ ಯಾಯಿತು. ಗೋದಾವರಿಬಾಯಿ ಮಂಜುಗಣ್ಣಲ್ಲಿ ಆತನೆದುರು ಕುಳಿತು ಅವನ ಮುಖವನ್ನೆಲ್ಲ ಸವರಿ, ಹಾಗೆ ಸವರುವಾಗ ತಟ್ಟನೆ ಕಣ್ಣೀರು ಕೆನ್ನೆ ಗಿಳಿಯುವುದನ್ನು ಯಾರಾದರೂ ನೋಡಿಯಾರೆಂದು ಸೆರಗಿನಿಂದ ಒರೆಸಿಕೊಳ್ಳು ವಾಗ ತಾಯಿಕರುಳಿನ ಬಗ್ಗೆ, ಸಂಬಂಧಗಳ ಸುಪ್ತರೂಪಗಳ ಬಗ್ಗೆ–ಅವರಿಗೆ ಆಶ್ಚರ್ಯವಾಗಿ ಮನತುಂಬಿ ಬರುವುದು. ನಾಣಿ ಬಂದ ಖುಷಿಯನ್ನು

ಭಾಗೀರಥಿ ಸಹ ಹಂಚಿಕೊಳ್ಳಲಿ ಎಂದು ತೀರ್ಥಹಳ್ಳಿಗೆ ಕಾಗದವೊಂದನ್ನು ಬರೆದು, ಬಿಡುವು ಮಾಡಿಕೊಂಡು ಬರುವಂತೆ ಒತ್ತಾಯಿಸಿದ್ದರು. ಇವರು ಕಾಗದ ಬರೆದ ಹತ್ತು ದಿನಕ್ಕೆ ಆಕೆಯೇ ಖುದ್ದಾಗಿ ನಾಣಿಗೆ ಇನ್ನೊಂದು ಕಾಗದ ವನ್ನೂ ಬರೆದಿದ್ದಳು. 'ಪ್ರಿಯ ನಾಣಿ, ನೀನು ಬಂದದ್ದು ಕೇಳಿ ತುಂಬ ಸಂತೋಷವಾಯಿತು. ನೀನು ಇಷ್ಟು ದಿನ ಎಲ್ಲಿದ್ದೆ ? ಏನು ಮಾಡುತ್ತಿದ್ದೆ. ನಿನ್ನನ್ನು ನೋಡಲು ನಾನು ಬರಬೇಕೆಂದಿದ್ದೇನೆ....' ಇತ್ಯಾದಿ.

o o o

'ನಿನ್ನನ್ನು ನೋಡಲು ಬರುತ್ತೇನೆ' ಎಂದು ಬರೆದು ಆರು ತಿಂಗಳಾದ ಮೇಲೆ ಭಾಗೀರಥಿ ಮಲ್ಲಿಗೆಹಳ್ಳಿಗೆ ನಾರಾಯಣನನ್ನು ನೋಡಲು ಸುರೇಂದ್ರ, ಗೋವಿಂದರೊಂದಿಗೆ ಬಂದಳು ! ಬಂದ ಹೊಸದಾಗಿನ ವಾತಾವರಣ ಹೋಗಿ ಮನೆಯಲ್ಲಿ ಆ ವೇಳೆಗಾಗಲೇ ನಾರಾಯಣ ಮಾಮೂಲಿ ವ್ಯಕ್ತಿಯಾಗಿದ್ದ. ಮೊದಲಿನಂತೆ ಅವನ ಮಾತು ಕಡಿಮೆಯಾದರೂ ಮಕ್ಕಳೊಂದಿಗೆ ಸಹಜವಾಗಿ ಬೆರೆಯುತ್ತಿದ್ದ. ಅವರನ್ನು ಆಟಕ್ಕೆ ಹುರಿದುಂಬಿಸಿದ್ದ. ಹೊಳೆದಂಡೆಗೆ ಕರೆ ದೊಯ್ಯುತ್ತಿದ್ದ. ಈಗ ಸೀತಾನದಿಯಿಂದ ಬಂದಿದ್ದ ಗೋವಿಂದನಿಗೆ ತಮ್ಮ ಚಿಕ್ಕಪ್ಪನ ಕುರಿತು ಶಾರದೆ–ನರಸಿಂಹ ಹೇಳುವರು.

ಕೃಷ್ಣಸ್ವಾಮಿಗಳು ನಾಣಿ ತನ್ನ ಮನಸ್ಸಿಗೆ ಬಂದ ಹಾಗಿರಲಿ. ಎಲ್ಲೆಲ್ಲಿ, ಏನೇನು ಅನುಭವಿಸಿ ಬಂದಿದ್ದಾನೋ ಎಂದುಕೊಂಡು ಗೋದಾವರಿಬಾಯಿಗೆ, ಸುಭದ್ರೆಗೆ ನಾರಾಯಣನ ಮನಸ್ಸಿಗೆ ನಾಟುವಂಥ ಯಾವ ಮಾತನ್ನೂ ಆಡ ಕೂಡದೆಂದು ತಾಕೀತು ಮಾಡಿದ್ದರು. ತಾವೇ ಖುದ್ದಾಗಿ ಹಾಸನದಿಂದ ಆತನಿ ಗಾಗಿ ಟ್ರೋಜರ್, ಶರ್ಟುಗಳನ್ನು ತಂದುಕೊಟ್ಟಿದ್ದರು. ಖರ್ಚಿಗೆ ಬೇಕಾದರೆ ಹಣ ಇಲ್ಲಿರುತ್ತದೆ ಎಂದು ಅಡುಗೆ ಮನೆಯಲ್ಲಿದ್ದ ಬೀಗಹಾಕದ ಕಬ್ಬಿಣಪೆಟ್ಟಿಗೆ ತೋರಿಸಿದ್ದರು. ಹೊಸದಾಗಿ ಕೊಂಡ ಜಮೀನನ್ನು, ಫಲ ತೂಗುವ ತೆಂಗು ತೋಟವನ್ನು ಕರೆದೊಯ್ದು ತೋರಿಸಿದ್ದರು. ತೆಂಗಿನ ತೋಟಕ್ಕೆ ಹೋದಾಗ– 'ನಿನಗೆ ನೆನಪಿದೆಯೇನೋ ನಾಣೀ ? ಮೊದಲು ಈ ಜಾಗ ಹೇಗಿತ್ತು ಅಂತ ? ಈಗ ನೋಡು, ಎರಡು ಸಾವಿರ ತೆಂಗಿನ ಮರಗಳಿವೆ. ನಮ್ಮ ಹಳ್ಳಿಯೂ ಎಷ್ಟೆಲ್ಲ ಬದಲಾಗಿದೆ ಅಲ್ಲವೇನೋ. ನೀನು–ಭಾಗೀರಥಿ ಓದುತ್ತಿದ್ದ ಶಾಲೆಯ

ಜಾಗದಲ್ಲೀಗ ಹೈಸ್ಕೂಲು ಕಟ್ಟಡ ಬಂದಿದೆ. ಎಲ್ಲೆಲ್ಲಿಂದಲೋ ಜನ ಬಂದು ಹಳ್ಳಿ ದೊಡ್ಡದಾಗಿದೆ.... ಹಾಗಂತ ಅನಿಸುಲ್ಲವಾ ?' ....ಎಂದು ಮಾತು ತೆಗೆಯುವರು. ನಾಣಿಯದು ವ್ಯಾವಹಾರಿಕ ಉತ್ತರ - ಹೂಂ, ಹೌದು, ಸರಿ.... ಅಷ್ಟೇ.

ಇಷ್ಟು ದಿನಗಳ ಕಾಲ ನಾಣಿ ಎದುರಿಗಿದ್ದರೆ ಸಾಕು– ಅವನೂ ನನ್ನ ಮಗನಲ್ಲವೆ ? ಇತ್ಯಾದಿ ಹಂಬಲಿಸುತ್ತಿದ್ದ ಗೋದಾವರಿಬಾಯಿಯ ಮಮಕಾರಕ್ಕೆ ಈಗ ಇನ್ನೊಂದು ಸೇರ್ಪಡೆಯಾಗಿತ್ತು. ಮರಳಿ ಬಂದ ಆತನಿಗೂ ಮದುವೆಯೊಂದನ್ನು ಮಾಡಿಬಿಟ್ಟರೆ ಕಣ್ಣು ಮಂಜಾದ ಈ ಮುದುಕಿ ಅವನ ಮಗನನ್ನೂ ನೋಡಿ ಕಣ್ಣು ಮುಚ್ಚಬಹುದು ಎಂಬುದು ಅವರ ಮನಸ್ಸಿನ ಹವಣಿಕೆ. ಜೀವದ ಆಸೆಗೆ ಕೊನೆಯೆಲ್ಲಿ ? ಇದಾದರೆ ಸಾಕು ಎಂದು ಹಂಬಲಿಸುವ ಅದು, ಕೇಳಿದ್ದು ಸಿಕ್ಕ ಕೂಡಲೇ ಅದಕ್ಕೆ ಪೂರಕವಾಗಿ ಇನ್ನೊಂದನ್ನು ಬಯಸುತ್ತದೆ. ಗೋದಾವರಿಬಾಯಿ ಸೀತಾನದಿಯಿಂದ ಭಾಗೀರಥಿ ಸುರೇಂದ್ರ ಬಂದಾದ ಮೇಲೆ ಕೃಷ್ಣಸ್ವಾಮಿಗಳ ಎದುರು ಈ ವಿಷಯ ಪ್ರಸ್ತಾಪಿಸಿದರು. ಇವರೆಲ್ಲ ಒತ್ತಾಯಿಸಿದರೆ ನಾರಾಯಣ ಮದುವೆಗೆ ಒಪ್ಪದೆ ಎಲ್ಲಿ ಹೋದಾನು ಎಂಬುದು ಅವರ ಅನಿಸಿಕೆ. ಅಮ್ಮನ ಆಶೆಯನ್ನೇಕೆ ಬಾಡಿಸಬೇಕು. ಕೃಷ್ಣಸ್ವಾಮಿಗಳು ನಾರಾಯಣನನ್ನು ಒಂದು ದಿನ ತಮ್ಮೊಂದಿಗೆ ತೋಟಕ್ಕೆ ಕರೆದೊಯ್ದು ವಿಷಯ ತೆಗೆದರು– 'ಇಷ್ಟು ದಿನ ದೇಶ ಸುತ್ತಿದ್ದು ಸಾಕು ನಾಣಿ. ಈಗ ಇಲ್ಲೇ ಮನೆ–ಮಠ ಎಲ್ಲ ಇದೆಯಲ್ಲ. ನೋಡು, ಜತೆಗೊಂದು ನಮ್ಮದೆನ್ನುವ ಜೀವವಿದ್ದರೆ ಏಕಾಂಗಿ ಅನಿಸುವುದಿಲ್ಲ. ಯಾವುದಾದರೂ ಒಳ್ಳೆಯ ಮನೆತನದ ಹುಡುಗಿಯನ್ನು ಬೇಕಾದರೆ ನೋಡೋಣ– ಒಂದು ಮದುವೆಯಂತ ಆಗಿ ಬಿಡು. ಕೊನೆಗಾಲದಲ್ಲಿ ಅಮ್ಮನ ಬಯಕೆಯನ್ನು ನಡೆಸಿಕೊಟ್ಟ ಹಾಗಾಗುತ್ತದೆ....' ಹೇಳಿ ನೋಡಿದರು. ಆದರೆ ನಾರಾಯಣ ಅದಕ್ಕೇನೂ ಉತ್ತರಿಸಲಿಲ್ಲ. ಮನೆಗೆ ಬಂದಾಗಲೂ ಭಾಗೀರಥಿ ಇದೇ ವಿಷಯವನ್ನು ಹಿತ್ತಲಿಗೆ ಕರೆದೊಯ್ದು ಹೇಳಿದಳು. ಊಟಕ್ಕೆ ಕೂತಾಗ ಗೋದಾವರಿಬಾಯಿ 'ನಾಣೀ ಹೂಂ ಅಂದುಬಿಡೋ' ಎಂದು ದುಂಬಾಲು ಬಿದ್ದರು. ನಾರಾಯಣನಿಗೆ ಇವರೆಲ್ಲ ತನ್ನನ್ನ ಹಿಂಸಿಸುತ್ತಿದ್ದಾರೆ ಅನಿಸಿತು. ಯಾಕೆ ಒಂಟಿಯಾಗಿರಲು ಬಿಡುತ್ತಿಲ್ಲ ಅನಿಸಿತು. ತನ್ನ ವಿರುದ್ಧ ಎಲ್ಲರೂ ಸೇರಿ

ಕೊಂಡು ತನ್ನನ್ನು ಕಟ್ಟಿ ಹಾಕಲು ನೋಡುತ್ತಿದ್ದಾರೆ ಅನಿಸಿತು. ಅವನ ಮನಸ್ಥಿತಿಯೇ ವಿಕ್ಷಿಪ್ತದ್ದು. ಎಲ್ಲೆಲ್ಲೋ ಸುತ್ತಿ ಏನೂ ಪಡೆಯದೆ ಹೋದ ತಪ್ತ ಮನಸ್ಸದು. ನಾನು ಸರಿಯಾಗಿಯೇ ಇದ್ದೇನೆ, ಯಾಕೆ ಇವರೆಲ್ಲ ಅರ್ಥ ಮಾಡಿಕೊಳ್ಳುತ್ತಿಲ್ಲ, ನನ್ನ ಮೇಲೆ ಇವರ್‍ಯಾರಿಗೂ ಕರುಣೆ–ಅನುಕಂಪವಿಲ್ಲ ಎಂದು ಹಲಬುತ್ತ ಆತ್ಮಮರುಕದಲ್ಲಿ ಕೊನೆಗೊಳ್ಳುವ ವಿಚಾರಸರಣಿ ಅವನದು. ಅವನಿಗೆ ಇವರ್‍ಯಾರ ಮೇಲೂ ನಂಬಿಕೆಯಿಲ್ಲ– ತನ್ನ ಮೇಲೂ ತನಗೆ ನಂಬಿಕೆಯಿಲ್ಲ. ಇದ್ದಷ್ಟು ದಿನ ಇಲ್ಲಿ ; ಎದ್ದ ದಿನ ಇನ್ನೊಂದು ಕಡೆ, ಅದಕ್ಕವನಿಗೆ ಅಮ್ಮ–ಅಣ್ಣ ತಂಗಿಯರ ಮನೆಯೇ ಆಗಬೇಕೆಂದಿಲ್ಲ. ಇವರೆಲ್ಲ ತನಗೆ ಕಾಟ ಕೊಡುತ್ತಿದ್ದಾರೆನಿಸಿ– 'ಮದುವೆ ಆಗೂದು ಬಿಡೂದು ನಂಗೆ ಸೇರಿದ್ದು, ನೀವ್ಯಾಕೆ ತಲೆ ಕೆಡಿಸಿಕೊಳ್ತೀರಿ, ನಾನೀಗ ಆಗುಲ್ಲ' ಎಂದು ಹೇಳಿ ಅರ್ಧ ಊಟಕ್ಕೆ ಎದ್ದು ಹೋಗಿಬಿಟ್ಟ. ಗೋದಾವರಿಬಾಯಿ ಕೂತಲ್ಲೇ ಮುಸುಮುಸು ಅಳತೊಡಗಿದಾಗ ಯಾರಿಗೂ ಎಲೆಯಲ್ಲಿ ಉಳಿದ ಅನ್ನದ ತುತ್ತು ಬಾಯಿಗೆ ಸೇರದಾಯಿತು.

'ಸರಿ ಬಿಡಿ. ಅವನಿಷ್ಟ, ಮತ್ತಿನ್ಯಾರು ಬಲವಂತ ಮಾಡುಕ್ಕೆ ಹೋಗಬೇಡಿ....'

ಎಂದು ಕೃಷ್ಣಸ್ವಾಮಿಗಳು ಎದ್ದು ಕೈತೊಳೆದರು.

ಹಾಗೆ– ನಾರಾಯಣ ಮದುವೆ ಬೇಡವೆನ್ನಲು ಗಹನವಾದ ಕಾರಣಗಳೇನು ಇರಲಿಲ್ಲ. ಹೆಣ್ಣಿನ ಸಂಗ ಅವನಿಗೆ ಹೊಸದೇನೂ ಅಲ್ಲ. ಬೇಕೆನಿಸಿದಾಗೆಲ್ಲ, ಅರಸೀಕೆರೆಯಲ್ಲಿ, ದಫ್ತರಿನಲ್ಲಿ ಕೆಲಸ ಮಾಡುವಾಗ ಚಿಕ್ಕಮಗಳೂರು ಹಾಸನ, ಸಕಲೇಶಪುರ ಎಂದು ತನ್ನ ಸಹಚರರೊಂದಿಗೆ ಅವನು ಹೋಗಿ ಬಂದದ್ದಿದೆ. ಮದುವೆಯ ದಿನ ಅಣ್ಣನಿಂದ ಐನೂರು ಇಸಿದುಕೊಂಡು ಹೋಗಿದ್ದು ಸಹ ಇಸ್ಪೀಟು ಆಡಬೇಕೆಂದು ಬಲವಾಗಿ ಅನಿಸಿ, ಕೈಗಳು ಚುರುಗುಟ್ಟ ತೊಡಗಿದ್ದರಿಂದಲೇ. ಇಸಿದುಕೊಂಡ ಐನೂರು ಆಟಕ್ಕೆ ಹಚ್ಚಿ ಗೆದ್ದಾದ ಮೇಲೆ ತೆಗೆದಿಟ್ಟು ಮರಳಿ ಅಣ್ಣನಿಗೆ ಕೊಟ್ಟು ಬಿಟ್ಟರಾಯಿತು ಎನ್ನುವುದು ಅವನ ಹವಣಿಕೆಯಾಗಿತ್ತು. ಮೈಸೂರಿನಲ್ಲಿ ಓದುವಾಗಲೇ ಅಂಟಿದ್ದ ಈ ಇಸ್ಪೀಟಿನ ಚಟ ಕೆಲಸಕ್ಕೆ ಸೇರಿ ಸಾಹೇಬನಾದ ಮೇಲೆ ತುಸು ಹೆಚ್ಚಾಗಿತ್ತು. ಜತೆಗಾರರೂ ಅಂತಹವರೆ. ಮೊದಲೇ ಆತ ಕೆಲಸ ಮಾಡುತ್ತಿದ್ದುದು ರೆವಿನ್ಯೂ ಇಲಾಖೆ

ಯಲ್ಲಿ ಸರ್ವೇಗಾಗಿ, ಆಫೀಸಿನ ಫೈಲು ವಿಲೇವಾರಿಗಾಗಿ ಊರೂರು ಅಲೆಯ ಬೇಕಾಗಿ ಬಂದಾಗ ಇವನ ಕಕ್ಷಿದಾರರು ಯಾವತ್ತೂ ಬರಿಗೈಯಲ್ಲಿ ಕಳಿಸಿದವ ರಲ್ಲ. ಜೂಜಿನ ಚಟವಿದ್ದವನಿಗೆ ನೈತಿಕತೆಯ ಪ್ರಶ್ನೆಯಲ್ಲಿ ? ಇವನಿಗೂ ಬೇಡವೆನ್ನುವ ಮನಸ್ಸಾಗುತ್ತಿರಲಿಲ್ಲ. ಆತ ಕೆಲಸ ಕಳೆದುಕೊಂಡದ್ದು ಆ ಕಾರಣಕ್ಕಾಗಿಯೇ !

ೲ ೲ ೲ

**ಕೆಲವು ಹಳೆಯ ವಿಚಾರಗಳು :**

ತನ್ನ ಸಹಚರರೊಂದಿಗೆ ಹಾಗೊಮ್ಮೆ ಸರ್ವೆಗೆ ಹೋದಾಗ ರಾತ್ರಿ ಯಾವುದೋ ಊರಲ್ಲಿ ಉಳಿಯಬೇಕಾಗಿ ಬಂತು. ಎರಡು ಮೂರು ಹಳ್ಳಿ ಗಳಿಗೆ ಬೆಳಿಗ್ಗೆಯಿಂದ ತಿರುಗಿ ವಸೂಲಿ ಮಾಡಿದ ಕಂದಾಯದ ಹಣ ಈತನ ಕೈಚೀಲದಲ್ಲೇ ಇತ್ತು. ಆ ಹಳ್ಳಿಯಲ್ಲಿ ಯಾರದೋ ಹಿರಿಯರ ಮನೆಯಲ್ಲಿ ಊಟ ಮಾಡಿ ಅವರ ಜಗುಲಿಗೆ ಇನ್ನೇನು ಒರಗಿ ನಿದ್ದೆ ಮಾಡಬೇಕೆನ್ನುವಲ್ಲಿ ಮನೆಯ ಯಜಮಾನ 'ನೀವು ಮಲಗಿರಿ, ಇಲ್ಲೇ ಪಂಚಾಯ್ತಿ ಕಛೇರಿಯಲ್ಲಿ ಒಂದು ಕೈ ಆಡಿ ಬರುತ್ತೇನೆ'– ಎಂದು ಹೊರಟರು. ನಾರಾಯಣನ ಮನ ಸ್ಸಿಗೆ ನೆಮ್ಮದಿಯೆನಿಸದಾಯಿತು. ಒಂದರ್ಧ ಗಂಟೆ ಬಲವಂತದಿಂದ ಕಣ್ಣು ಮುಚ್ಚಿದರೂ ನಿದ್ದೆ ಬರದಾಯಿತು. ಸುಮ್ಮನೆ ನಾನೂ ಒಂದು ಕೈ ನೋಡುವಾ ಎಂದು ತಾನೂ ಅತ್ತ ಹೊರಟ. ಸರ್ಕಾರಿ ಹಣವೇ ಅವನ ಕೈಚೀಲದಲ್ಲಿ ಕುಣಿಯುತ್ತಿದ್ದಾಗ ಬೇರೆ ಧೈರ್ಯ ಬೇಕಿರಲಿಲ್ಲ. ಅಲ್ಲಿಗೆ ಹೋಗಿ ಅವ ರೊಂದಿಗೆ ಆಟಕ್ಕೆ ಕೂತವನು ತನ್ನ ಕೈಚಳಕದಿಂದ ಅವರ ಬಳಿ ಇದ್ದ ಹಣ ವನ್ನೆಲ್ಲ ತಾನು ಕೂತ ಕಾಲಿನ ಬಳಿ ಗುಡ್ಡೆ ಹಾಕಿಕೊಂಡ. ಮುಗಿಯಿತಾ ನಿಮ್ಮ ಕತೆ ಎಂದು ಅವರನ್ನು ಹೀಯಾಳಿಸಿ ಕೆಣಕಿದ. ಸರಿ, ಅಲ್ಲಿದ್ದವರು ಕೈಯ ಲ್ಲಿದ್ದ ಉಂಗುರ, ಕೊರಳಲ್ಲಿದ್ದ ಹುಲಿಯುಗುರಿನ ಚೈನು ಪಣಕ್ಕಿಟ್ಟು ಹಠದಲ್ಲಿ ಕುಳಿತರು. ಆಮೇಲೆ ಆಗುವುದೆಲ್ಲ ಆಯಿತು. ಏನು ಮಾಡಿದರೋ– ನಾರಾ ಯಣನ ಬಳಿ ಚಿಕ್ಕಾಸೂ ಉಳಿಯದಂತೆ ಮಾಡಿ ಕಳಿಸಿದರು. ನಾರಾಯಣನಿಗೆ ಇದರಿಂದ ದಿಕ್ಕೇ ತೋಚದಾಗಿ ಕಂಗೆಟ್ಟು ಹೋದ. ಬೆಳಕು ಹರಿಯಲು

ಸಮೀಪಿಸುತ್ತಿದ್ದುದರಿಂದ ಎಲ್ಲರೂ ಎದ್ದು ಹೋಗಿದ್ದರೂ ಇವನೊಬ್ಬನೇ ಉಳಿದ. ಅದೇ ಜಾಗಕ್ಕೆ ಒರಗಿ ಚಿಂತಿಸಿದ.

ರಾತ್ರಿಯೆಲ್ಲ ಆಟವಾಡಲು ಕೂತ ಜಾಗದಲ್ಲೇ ಬಿದ್ದು ಕಣ್ತೆರೆದು ಜಂತಿ ಎಣಿಸುತ್ತ ಯೋಚಿಸಿದರೂ ಯಾವ ಉಪಾಯವೂ ಹೊಳೆಯಲಿಲ್ಲ. ನಾರಾಯಣ ಅತಿ ಇಕ್ಕಟ್ಟಿಗೆ ಸಿಕ್ಕಿದ್ದ. ಬೆಳಿಗ್ಗೆ ಕಛೇರಿ ವೇಳೆಗೆ ಅರಸೀಕೆರೆಗೆ ಹೋದರೆ ಕಂದಾಯದ ಹಣವನ್ನವನು ಬ್ಯಾಂಕಿಗೆ ತುಂಬದಿದ್ದರೆ ಪರಿಸ್ಥಿತಿ ದೀರ್ಘಕ್ಕೆ, ಎಷ್ಟರವರೆಗೆಂದರೆ ಕೆಲಸ ಹೋಗುವಷ್ಟು, ಹೋಗುವ ಸಾಧ್ಯತೆಯಿತ್ತು. ಮೊದಲೇ ಅದು ಸರ್ಕಾರಿ ಹಣವಾಗಿದ್ದರಿಂದ ಸ್ವಲ್ಪವೂ ವ್ಯತ್ಯಾಸವಾಗುವಂತಿರಲಿಲ್ಲ. ಮೇಲಿನ ಅಧಿಕಾರಿಗಳಿಗೆ ವಿಷಯ ಗಮನಕ್ಕೆ ಬರುವ ಮೊದಲೇ ಪ್ರಕರಣವನ್ನು ಕೊನೆಗಾಣಿಸಬೇಕಿತ್ತು. ಈತ ಹತಾಶನಾಗಿ, ತಲೆ ಮೇಲೆ ಕೈ ಹೊತ್ತು ಪಂಚಾಯ್ತಿ ಕಛೇರಿಯಲ್ಲಿ ಕುಳಿತಿದ್ದು ಅವನೊಂದಿಗೆ ಬಂದವರಿಗೆ ಗೊತ್ತಾಯಿತು. ಬೆಳಿಗ್ಗೆ, ಅಲ್ಲಿಗೆ ಬಂದವರೇ, ಇತರರಿಂದ ನಸುತುಸು ವಿಚಾರ ತಿಳಿದಿದ್ದರೂ ಅವನ ಬಾಯಿಂದಲೇ ಏನೆಂಬುದನ್ನು ಹೊರಡಿಸಲು ನೋಡಿದರು. ಆದರೆ ನಾರಾಯಣ ತುಟಿಬಿಚ್ಚಲಿಲ್ಲ. ಸಹಾಯ ಮಾಡಲು ಬಂದವರಿಗೆ ತನ್ನ ಹತಾಶ ಮನಃಸ್ಥಿತಿಯಲ್ಲಿ– 'ನಿಮ್ಮ ಕೆಲ್ಸ ನೀವು ನೋಡ್ಕಳಿ' ಎಂದವನು ಗದರಿದ್ದು ಅವರಿಗೆ ಬೇಸರತರಿಸಿ, 'ಶೆಗಣಿ ತಿಂದಿದೀಯ ಅನುಭವಿಸು' ಎನ್ನುವಂತೆ ಮಾಡಿತು. ಸಹಚರರೆಲ್ಲ ಮತ್ತೊಂದೂ ಮಾತಾಡದೆ ಅರಸೀಕೆರೆಗೆ ಹೋಗಲು ಸಿದ್ಧತೆ ನಡೆಸಿದರು. ಅವರ ಹಿಂದೆ ತಾನೂ ಆ ವೇಳೆಗೆ ಕಛೇರಿಯಲ್ಲಿರಬೇಕಿದ್ದುದರಿಂದ ನಿರ್ವಾಹವಿಲ್ಲದೆ ಕಾಲು ಹಾಕಿದ.

ದಾರಿಯಲ್ಲಿ ಬರುತ್ತ ಆತನಿಗೆ ಇನ್ನೊಂದು ಆಸೆಯೂ ಚಿಗುರಿತು. ಅರಸೀಕೆರೆಯ ಮಂಡಿಪೇಟೆಯ ವರ್ತಕರೊಡನೆ ಹೇಗಿದ್ದರೂ ತನ್ನ ವಹಿವಾಟು ಇದೆ. ಅವರು ಸಾಲ ಕೇಳಿದರೆ ಇಲ್ಲವೆನ್ನಲಾರರು ಎಂದುಕೊಂಡವನೆ ತುಸು ಗೆಲುವಾದ. ಜತೆಗೆ ಬಂದವರನ್ನೆಲ್ಲ ಕಛೇರಿಗೆ ಕಳಿಸಿ ಮಂಡಿಪೇಟೆಯಲ್ಲಿ ಮಧ್ಯಾಹ್ನದವರೆಗೂ ಒಂದು ಸುತ್ತು ಹಾಕಿದ. ಆದರೆ ಅದ್ಯಾವ ಮಾಯೆಯಿಂದಲೋ ಅಥವ ಇವನ ಚಟಗಳ ಅರಿವಿದ್ದುದರಿಂದಲೋ ಇವನು ನಂಬಿದವರು ತಮ್ಮ ಬರಿಗೈಗಳನ್ನು ಆಡಿಸಿಬಿಟ್ಟರು. ಅದೇ ಬೇಸರದಲ್ಲಿ ಕಛೇರಿಗೆ ಹೋದ. ವಿಷಯ ಅಲ್ಲಿಯೂ ತಿಳಿದು ಎಲ್ಲರೂ ಗುಸು ಗುಸು ಮಾಡುತ್ತಿದ್ದರು.

ನಾರಾಯಣ ಈಗ ಇನ್ನಷ್ಟು ಅಪ್ರತಿಭನಾಗಿ ನಾಳೆ ಮೇಲಿನವರನ್ನು ಎದುರಿಸು ವುದು ಹೇಗೆ ಎಂದು ವಾರಕಾಲ ರಜಾ ಹಾಕಿ ಚಿಕ್ಕಮಗಳೂರಿಗೆ ನಡೆದುಬಿಟ್ಟ. ಅಲ್ಲಿನ ಅಧಿಕಾರಿ ಸ್ನೇಹಿತರೇನಾದರೂ ಸಹಾಯ ಮಾಡಬಹುದೆಂದು ಅವನ ನಂಬಿಕೆಯಾಗಿತ್ತು. ಆದರೆ ಅಲ್ಲಿಯೂ ಪ್ರಯೋಜನವಾಗಲಿಲ್ಲ. ಎರಡು ಸಾವಿರ ರೂಪಾಯಿಯನ್ನು ನಿಂತ ಕಾಲ ಮೇಲೆ ಬಂಡವಾಳದವರಲ್ಲದೆ ಯಾರು ತಾನೇ ಅವನಿಗೆ ಕೊಡಲು ಸಾಧ್ಯ ? ಮಂಡಿಪೇಟೆಯವರಂತೂ ಮೊದಲೇ ಲೆಕ್ಕ ಹಾಕಿ ಈತನ ಎರಡು ವರ್ಷದ ಸಂಬಳ– ಮೇಲುಗಳಿಕೆ ಎಲ್ಲ ಸೇರಿದರೂ ಅಷ್ಟಾಗುವದಿಲ್ಲವಲ್ಲ ಎಂದು ನಯವಾದ ಮಾತನ್ನಾಡಿ ಕೈ ತೊಳೆದುಕೊಂಡು ಬಿಟ್ಟಿದ್ದರು. ಇನ್ನುಳಿದದ್ದೆಂದರೆ ಮನೆಯಲ್ಲಿ ಕೇಳುವುದು. ಅಮ್ಮನೆದುರು– ಅಣ್ಣನೆದುರು ಹೇಳಲು ಸ್ವಾಭಿಮಾನ ಅಡ್ಡ ಬಂತು. ನಾಚಿಕೆಯೆನಿಸಿತು. ದಿಕ್ಕೆಟ್ಟವನ ಹಾಗೆ ಅಲ್ಲಿ ಇಲ್ಲಿ ತಿರುಗಿ ವಾರದ ನಂತರ ಮತ್ತೆ ಕಚೇರಿಗೆ ಹೋದಾಗ ಇವನು ಮಾಡುವದೇನೂ ಉಳಿದಿರಲಿಲ್ಲ. ಮೇಲಿನಧಿಕಾರಿಗಳು 'ಕೆಲಸದಿಂದ ವಜಾ ಮಾಡಿರುವುದಾಗಿಯೂ, ಒಂದು ತಿಂಗಳಲ್ಲಿ ಸರ್ಕಾರಿ ಹಣ ವನ್ನು ಸರ್ಕಾರಿ ಖಜಾನೆಗೆ ಜಮಾ ಮಾಡದಿದ್ದರೆ ಜೇಲಿಗೆ ಹೋಗಬೇಕಾಗ ಬಹುದೆಂದೂ ಅದಕ್ಕೆ ಸಿದ್ಧರಾಗಿರಬೇಕೆಂದೂ'— ನೋಟಿಸನ್ನು ಬೋರ್ಡಿಗೆ ಅಂಟಿಸಿದ್ದರು.

ನಾರಾಯಣನಿಗೆ ಅಲ್ಲಿ ನಿಲ್ಲಲು ಅವಮಾನವಾಗಿ ನೇರ ಹಳ್ಳಿಗೆ ಬಂದು ಬಿಟ್ಟಿದ್ದ. ಅದೇ ವೇಳೆಯಲ್ಲಿ ಅಣ್ಣನ ಮದುವೆಯೂ ನಡೆಯುವುದಿತ್ತಾದ್ದ ರಿಂದ ಏನಾದರೂ ಮಾಡಿ ಹಣ ಹೊಂದಿಸುವುದು ಕಷ್ಟವಾಗಲಾರದೆಂದು ಅವನ ಹವಣಿಕೆ. ಆದ್ದರಿಂದ ಮದುವೆಯ ರಾತ್ರಿ ಕೃಷ್ಣಸ್ವಾಮಿಯಿಂದ ಐನೂರು ತೆಗೆದುಕೊಂಡು ಅವನು ಹೊರಟಿದ್ದು. ಆ ಹಣವನ್ನೇ ದ್ವಿಗುಣ ಮಾಡಿ ಖಜಾನೆಗೆ ಕಟ್ಟಿ ಕೈ ತೊಳೆದುಕೊಳ್ಳಬೇಕೆಂದು ಅವನು ಬಯಸಿದ್ದ. ಆದರೆ ಅದೃಷ್ಟ ಕೈಕೊಟ್ಟಾಗ ; ಯಾವ ನಂಬಿಕೆಯೂ ಇಲ್ಲದಾದಾಗ ಬದುಕು ತನ್ನ ಬೇತುವನ್ನು ಸಾಧಿಸಿಬಿಡುತ್ತದೆ. ನಾರಾಯಣ ಇರುವ ಹಣವನ್ನೂ ಕಳೆದುಕೊಂಡು ಮತ್ತೆ ಹಳ್ಳಿಗೆ ಹೋಗಲು ವಿಚಿತ್ರ ಅವಮಾನವಾಗಿ ತನಗೆ ಗೊತ್ತಿಲ್ಲದ ಗುರಿ ಹುಡುಕಿ ಹೊರಟುಬಿಟ್ಟಿದ್ದ. ಆ ವರ್ಷಗಳಲ್ಲಿ ಅವನ ಒಂಟಿ

ತನ–ಹತಾಶೆ ಇನ್ನಷ್ಟು ಹೆಚ್ಚಾಗಿ, ಬಳಲಿ ಕಡೆಗೆ ಬದುಕಿದರೆ ಸಾಕೆಂದು ಸೂರು ಹುಡುಕಿ ಮಲ್ಲಿಗೆಹಳ್ಳಿಗೆ ಬಂದಿದ್ದ.

ಇಲ್ಲಿಗೆ ಬಂದಮೇಲೆ ಇಲ್ಲಿನವರ ಪ್ರೀತಿ, ಮಮಕಾರ, ತನಗಾಗಿ ಅವರು ಹಂಬಲಿಸಿದ್ದು ಕಡೆಗೂ ತನಗೆ ನೆಮ್ಮದಿ ಸಿಗುತ್ತಿದೆಯೆನಿಸಿದ್ದು ಅವನನ್ನು ಸ್ವಲ್ಪ ನಿರಾಳವಾಗಿಸಿತ್ತು. ಆದರೆ ಇದ್ದಕ್ಕಿದ್ದಹಾಗೆ ಎಲ್ಲರೂ ಮದುವೆಗಾಗಿ ಒತ್ತಾಯಿಸಿದಾಗ ಅವರೆಲ್ಲರ ಮೇಲೆಯೇ ಅನುಮಾನ ಪ್ರಾರಂಭವಾಯಿತು. ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಇವರೆಲ್ಲ ಇಚ್ಛಿಸುತ್ತಾರೆಂದು ಅವನು ಬಗೆದ. ತಾನು ಎಲ್ಲಿ ಹೋದರೂ ಅಭದ್ರ ಎಂಬ ಭಾವನೆ ಸುರುವಾಯಿತು. ಕಡೆಗಾತ ನಿರ್ಧರಿಸಿದ – ಇವರನ್ನೆಲ್ಲ ಗದರಿಸಿಯಾದರೂ ತಾನಿಲ್ಲಿ ನೆಲೆಯೂರಬೇಕು ಎಂದು. ಆದ್ದರಿಂದಲೇ ಮದುವೆಯ ಬಗ್ಗೆ ಅಷ್ಟೊಂದು ಕಠಿಣವಾದ ಮಾತುಗಳನ್ನವನು ಆಡಿದ್ದು.

ಕೃಷ್ಣಸ್ವಾಮಿಯನ್ನು ಮೊದಲುಗೊಂಡು, ನಾರಾಯಣ – 'ಹೆಚ್ಚು ಬಲವಂತ ಮಾಡಿದರೆ ಮತ್ತೆ ಮನೆಬಿಟ್ಟು ಹೋಗ್ತೀನಿ' ಅಂದಿದ್ದು ಎಲ್ಲರಿಗೂ ಭೀತಿ ಹುಟ್ಟಿಸಿತ್ತು. ಅಂದಂತೆಯೇ ಆತ ಮಾಡಿಬಿಟ್ಟರೆ ಈ ಸಲದ ಅನಾಹುತಕ್ಕೆ ನಾವೇ ಕಾರಣರಾಗುತ್ತೇವೇನೋ ಎಂಬ ಭಾವನೆ ಬೇರೆ ಅವರನ್ನು ಮುತ್ತಿದ್ದರಿಂದ ಗೋದಾವರಿಬಾಯಿಯನ್ನು ಮೊದಲ್ಗೊಂಡು ಎಲ್ಲರೂ ಅವನಿಂದ, ಅವನ ಮಾತುಗಳಿಂದ ಆದಷ್ಟು ದೂರವಿರಲು ಯತ್ನಿಸಿದರು.

ನಾರಾಯಣ ಹಾಗೆ ಹೇಳಿದಾಗಿನಿಂದ ಯಾರೂ ತನ್ನ ಬಳಿ ಸುಳಿಯದಿರುವುದನ್ನು ಕಂಡು ಒಳಗೊಳಗೆ ನೆಮ್ಮದಿಯ ನಿಟ್ಟುಸಿರು ಬಿಟ್ಟ. ಭಾಗೀರಥಿ ಮಾತ್ರ ಊರಿಗೆ ಹೋಗುವ ಮೊದಲು ಮತ್ತೊಮ್ಮೆ ಒತ್ತಾಯಿಸಿದ್ದಳು. ಇವನೂ–ಹಾಗನಿಸಿದ್ದಾದರೆ ಪತ್ರ ಬರೆದು ಹಾಕ್ತೀನಿ ಅಂದಿದ್ದ. ಆತ ಬೇರೆಯವರಿಗೆಲ್ಲ ಸಿಡುಕಿನವನಾದರೂ ಭಾಗೀರಥಿಯೊಂದಿಗೆ ಮಾತ್ರ ಯಾವ ಬದಲಾವಣೆಯೂ ಇಲ್ಲದೆ ಮೊದಲಿನಂತೆಯೇ ಇದ್ದುದು ಸ್ವತಹ ಆಕೆಗೇ ಆಶ್ಚರ್ಯ ತರಿಸಿತ್ತು. ಅವನಿಗೇನೂ ಭಾಗೀರಥಿಗೆ ಪತ್ರ ಬರೆಯುವ ಉದ್ದೇಶವಿಲ್ಲದಿದ್ದರೂ ಮಾತಿಗೆ ಇರಲೆಂದು ಹಾಗೆ ಹೇಳಿದ್ದನಷ್ಟೇ. ಮದುವೆಯಿಲ್ಲದೆಯೂ ಯಾವ ಸುಖಕ್ಕೂ ಕಡಿಮೆಯಿಲ್ಲದ ಹಾಗೆ ಇರಬಲ್ಲದಾದರೆ ಮತ್ಯಾಕೆ ಹೊರೆ ಎಂಬ ಭಾವನೆ ಅವನದಾಗಿತ್ತು. ಮನೆಯಲ್ಲೇನೂ ಈತ ಎಷ್ಟೇ ಹಣ ತೆಗೆದು

ಕೊಂಡು ಆಗೀಗ ಮೈಸೂರು ಹಾಸನ ಅಂತ ಸುತ್ತುವುದಕ್ಕೆ ಯಾರೂ ಅಡ್ಡಿ ಮಾಡಿರಲಿಲ್ಲ. ಕೃಷ್ಣಸ್ವಾಮಿಗಳು ಎಂದೂ 'ಅಲ್ಲವೋ ನಾಣಿ, ಇಷ್ಟು ಹಣ ತಗೊಂಡು ಹೋಗಿದ್ದೆಯಲ್ಲ ಏನು ಮಾಡಿದೆ' ಎಂದು ಹೇಳಿದವರಲ್ಲ. ಗೋದಾವರಿಬಾಯಿಗೆ ತಾಕೀತು ಮಾಡಿದ್ದರಿಂದ, ಅಲ್ಲದೆ ಹಣವೆಂದರೆ ಅವರಿನ್ನೂ ಹಳೆ ಕಾಲದ ಟಂಕ, ದುಗ್ಗಾಣಿ, ಬಂದಾ ಎಂಬ ತಿಳುವಳಿಕೆಯಲ್ಲಿದ್ದರಿಂದ ಅವರು ವಿಚಾರಿಸುವ ಪ್ರಮೇಯವೇ ಇರಲಿಲ್ಲ. ಸುಭದ್ರೆಗಂತೂ ಮೈದುನನ ನಿಕಟ ವಹಿವಾಟೇ ಇರಲಿಲ್ಲವಾದ್ದರಿಂದ ಆ ಸಮಸ್ಯೆಯೇ ಉದ್ಭವಿಸಿರಲಿಲ್ಲ. ಇನ್ನು ಕೇಳುವುದಾದರೂ ಯಾರು ? ಮನಸ್ಸಿನಲ್ಲಿಯೇ ನಾರಾಯಣ ದುಂದು ವೆಚ್ಚದಲ್ಲಿ ದುಶ್ಚಟಗಳಿಗೆ ಹಣ ವಿನಿಯೋಗಿಸುತ್ತಿದ್ದಾನೆಂದು ಕೃಷ್ಣಸ್ವಾಮಿಗಳಿಗೆ ಅನಿಸಿದರೂ ಅದನ್ನವರು ಹೊರ ಹಾಕಿರಲಿಲ್ಲ. ದುಡುಕಿನ ಮಾತಿನಿಂದ ಕೆಟ್ಟದ್ದು ಘಟಿಸೀತೆಂದು ಅಂದುಕೊಂಡು ಸುಮ್ಮನಾಗಿಬಿಡುವರು. ನಾರಾಯಣ ತನ್ನ ಪಾಡಿಗೆ ತಾನಿದ್ದರೆ ಸಮಸ್ಯೆಯೇ ಇರುತ್ತಿರಲಿಲ್ಲ. ಆದರೆ ಆಗೀಗ ನರಸಿಂಹನ ಕೈಯಲ್ಲಿ ತುಸು ಹೆಚ್ಚೆನಿಸುವಷ್ಟು ದುಡ್ಡು ಕೊಡುವುದು, ಮನೆಯಲ್ಲಿ ಹೇಳದೇ ಅವನನ್ನೊಮ್ಮೆ ಅರಸೀಕೆರೆಗೆ ಕರೆದೊಯ್ದು ಹೋಟೇಲಿನ ತಿಂಡಿಕೊಡಿಸಿ, ಸಿನೆಮಾ ತೋರಿಸಿ ಕರೆತಂದದ್ದು ಕೃಷ್ಣಸ್ವಾಮಿಗಳ ಮನಸ್ಸಿಗೆ ಕಿರಿಕಿರಿಯುಂಟು ಮಾಡಿತ್ತು. ಅವರೆಂದೂ ಮಕ್ಕಳ ಯೋಗಕ್ಷೇಮವನ್ನು ಕಡೆಗಣಿಸಿದವರಲ್ಲ. ತಿಂಗಳಿಗೊಮ್ಮೆ ತಪ್ಪದೇ ಪೇಟೆಗೆ ಕರೆದುಕೊಂಡು ಹೋಗಿ ಅವು ಕೇಳಿದ್ದನ್ನು ಕೊಡಿಸಿ ಕರೆತರುತ್ತಿದ್ದರು. ಆದರೆ ಕೈಯಲ್ಲಿ ಹಣ ಕೊಟ್ಟರೆ ಕೆಟ್ಟಾವೆಂಬ ಕಾರಣಕ್ಕೆ ಆ ವಿಷಯದಲ್ಲಿ ಮಾತ್ರ ಕಟ್ಟುನಿಟ್ಟಾಗಿದ್ದರು. ಅಷ್ಟೇಕೆ ಇನ್ನು ಎಂಟನೆಯ ತರಗತಿ ದಾಟಿರದ ಮಗನಿಗೆ, ಮಗಳಿಗೆ ಕಟ್ಟಿಕೊಳ್ಳಲಿ ಓದುವ ಹುಡುಗರು ಎಂದು ವಾಚು ತಂದುಕೊಟ್ಟಿದ್ದರು. ಆ ಹಳ್ಳಿ ಶಾಲೆಯಲ್ಲಿ ಮೊದಲ ಬಾರಿಗೆ ವಾಚು ಕಟ್ಟಿ ಶಾಲೆಗೆ ಬಂದವರೆಂದರೆ ಶಾರದೆ ಮತ್ತು ನರಸಿಂಹ ಮಾತ್ರ ! ಇಷ್ಟು ಪ್ರೀತಿಯಲ್ಲಿ ಬೆಳೆಸಿದ ಮಕ್ಕಳನ್ನು ಎಲ್ಲಿ ನಾರಾಯಣ ಅಡ್ಡದಾರಿಗೆಳೆಯುತ್ತಾನೋ ಎನ್ನುವ ಅಳುಕು ಕಾಡಿದರೂ ಬಾಯಲ್ಲಿ ಹೇಳಲು ಆಗದಂಥ ಸ್ಥಿತಿ ಅವರದಾಗಿತ್ತು !

ಇವರದೆಲ್ಲ ಒಂದು ರೀತಿಯ ಸಂಕಟವಾದರೆ ಊರೂರು ಅಲೆದು ಹಲವು ರೀತಿಯ ರುಚಿ ಕಂಡ ನಾರಾಯಣನದು ಇನ್ನೊಂದು ರೀತಿಯ ಸಂಕಟ.

ಅವನಿಗೆ ಜಿಯೋ ಜಿಟ್ಟನ್ನುವ ಈ ಹಳ್ಳಿಯಲ್ಲಿ ಕಾಲ ಕಳೆಯುವುದು ಬೇಸರ-ರೇಜಿಗೆ. ಎಂದೂ ಒಂದು ಕಡೆ ಕಾಲೂರಿ ನಿಂತವನಲ್ಲ ಅವನು. ಈಗೇನೋ ಹಳ್ಳಿಯಲ್ಲಿಯೇ ನೆಲೆಯೂರಬೇಕೆಂದು ಬಯಸಿ ಬಂದಿದ್ದರೂ ಅವನಿಂದ ಆದಾಗದು. ಅದಲ್ಲದೆ ಇತ್ತೀಚೆಗೆ ಮೈಸೂರಿಗೆ ಹೋದಾಗ ಇವನ ಸೊಡ್ಡಪ್ಪ ತಿಮ್ಮಪ್ಪಯ್ಯನ ಮಗ ಧೀರೇಂದ್ರ ಬೇರೆ ಸಿಕ್ಕು ಇನ್ನೇನನ್ನೊ ತಲೆತುಂಬಿ ಕಳಿಸಿದ್ದ. ಇವನ ಅಲೆಮಾರಿ ಆಲೋಚನೆ ಧೀರೇಂದ್ರ ಹೇಳಿದ ಮಾತುಗಳಿಗೆ ಮೊಳೆ ಹೊಡೆದು ಕುಳಿತಿತು. ಹಳ್ಳಿಗೆ ಬಂದವನೇ ಕೂತಲ್ಲಿ – ನಿಂತಲ್ಲಿ ಅದನ್ನೇ ಯೋಚಿಸಿದ. ತೋಟಕ್ಕೆ ಹೋಗಿ ತೆಂಗಿನ ಮರಗಳನ್ನು ಎಣಿಸುತ್ತ, ಆಲೋಚನೆಯಲ್ಲಿ ಎಣಿಸಿದ್ದೆಷ್ಟೆನ್ನುವುದನ್ನೇ ಮರೆತ. ಆದರೂ ಒಂದು ನಿರ್ಧಾರಕ್ಕೆ ಬಂದ. ಮನಸ್ಸು ಗಟ್ಟಿಯಿಲ್ಲದೆ ತಾನಂದುಕೊಂಡದ್ದನ್ನು ಅಮ್ಮ, ಅಣ್ಣರ ಎದುರು ಹೇಗೆ ಹೇಳುವುದೆಂದು ಹಿಂದೇಟು ಹಾಕತೊಡಗಿದ. ಎಷ್ಟೋ ಸಲ ಇಂದು ಹೇಳಿಬಿಡಬೇಕೆಂದು ಕೃಷ್ಣಸ್ವಾಮಿ ಎದುರುಬಂದಾಗಲೊಮ್ಮೆ ಅಂದುಕೊಂಡರೂ ಅವರ ಮುಖ ನೋಡಿದ್ದೇ ಒಂಥರದ ಭಯವಾಗಿ ಸುಮ್ಮನಾಗಿಬಿಡುತ್ತಿದ್ದ. ಕಡೆಗೆ ಇದಕ್ಕೊಂದು ಉಪಾಯ ಅವನಿಗೆ ಹೊಳೆಯಿತು. ಹಾಗನಿಸಿದ್ದೇ ಭಾಗೀರಥಿಗೆ ತುರ್ತಾಗಿ ಪತ್ರ ಬರೆದು ಹಾಕಿದ. 'ಇದು ಮನೆತನದ ವಿಚಾರ ಮಾತಾಡುವಾಗ ನೀನಿದ್ದರೆ ಒಳ್ಳೆಯದು, ಪತ್ರ ಕಂಡ ಕೂಡಲೇ ಬಾ' ಎಂಬುದು ಪತ್ರದ ಸಾರಾಂಶವಾಗಿತ್ತು. ಅವನು ಎಣಿಸಿದ ಹಾಗೆ ಭಾಗೀರಥಿ ಮುಂದೆ ನಾಲ್ಕು ದಿನಕ್ಕೆ ಮಲ್ಲಿಗೆ ಹಳ್ಳಿಗೆ ಬಂದಿಳಿದರು.

ತನ್ನ ವಿಚಾರ ಕೈಗೂಡಬೇಕಾದರೆ ಮೊದಲು ಭಾಗೀರಥಿ-ಅಮ್ಮರನ್ನು ಮನವೊಲಿಸಬೇಕೆಂದು ಗೊತ್ತಿದ್ದ ನಾರಾಯಣ ಭಾಗೀರಥಿಗೆ ಪತ್ರ ಬರೆದಿದ್ದ. ಆದರೆ ಆ ವಿಚಾರವನ್ನು ಮನೆಯಲ್ಲಿ ತಿಳಿಸಿರಲಿಲ್ಲವಾದ್ದರಿಂದ ಆಕೆ ಮನೆಯ ಮೆಟ್ಟಿಲನ್ನು ಕೈಯಲ್ಲಿ ಟ್ರಂಕು ಹಿಡಿದು ತುಳಿದಾಗ ಎಲ್ಲರಿಗೂ ಆಶ್ಚರ್ಯ ಆಗಬಾರದ್ದಾಯಿತೋ ಎಂದು ಭಯ. 'ಅದೇನು ಎಲ್ಲಾರು ಹೀಗೆ ನೋಡ್ತೀರ, ನಾಣಿ ಪತ್ರ ಮುಟ್ಟಿ ಬಂದೆ. ನಿಮುಗ್ಯಾರಿಗೂ ನಾ ಬರೂ ವಿಚಾರ ತಿಳದಿಲ್ಲ ?' ತುಸು ಅಸಮಾಧಾನದಲ್ಲಿ ಆಕೆ ನುಡಿದಾಗ, ಕೃಷ್ಣಸ್ವಾಮಿಗಳೇ ಮಾತಿಗೆ ಮುಂದಾಗಿ – 'ನಿನ್ನ ಮನೆಗೆ ನೀ ಬರುಕ್ಕೆ ಹಿಂಜರಿಕೆ

ಯಾಕೆ ? ನೀ ಬರೂ ವಿಷಯ ತಿಳಿದಿದ್ರೂ, ಸುರೇಂದ್ರ ಬಂದಿಲ್ಲವಲ್ಲ ಎಂದು ಆಶ್ಚರ್ಯವಾಯಿತಷ್ಟೇ' ಎಂದು ಸರಿದೂಗಿಸಿದ್ದರು. ಎಲ್ಲರೂ ಆಕೆಯೊಂದಿಗೆ ಒಳಹೋದ ಮೇಲೆ ನಾಣಿ ಯಾರಿಗೂ ಹೇಳಿಲ್ಲವೆಂದಮೇಲೆ ತಮಗರಿಯದ್ದು ಏನೋ ನಡೆಯುತ್ತಿದೆ ಎನಿಸಿ ತುಸು ಖಿನ್ನರಾದರು. ಇಲ್ಲದಿದ್ದರೆ ಗಂಡನನ್ನು ಹೋಗಲಿ ಮಗನನ್ನೂ ಬಿಟ್ಟು ಬರುವಂಥದ್ದೇನು ನಿಂತಿತ್ತು ? ಎಂದು ಯೋಚಿಸಿದರು.

ಭಾಗೀರಥಿಗೆ ಮೊದಲು ನಾಣಿಯ ವಿಚಾರ ಕೇಳಿ ಭಯವಾಯಿತು. ಆಕೆ ಒಲ್ಲೆನೆಂದರೆ ಒಲ್ಲೆ ಎಂದಳು. ನಾರಾಯಣ ಪರಿಪರಿಯಾಗಿ, ಆಕೆಯನ್ನು, ತನ್ನ ಮಾತುಗಳಿಂದ ತಿಳಿಪೇಳಿದ. "ಅಲ್ಲವೆ ನಾವೇನು ಕೇಳುತ್ತಿರುವುದು ಬೇರೆ ಏನಲ್ಲವಲ್ಲ. ನಮ್ಮ ಪಿತ್ರಾರ್ಜಿತ ಆಸ್ತಿಯಲ್ಲವೇನು ಅದು ? ಅವನಷ್ಟೇ ಅದರ ಮೇಲೆ ನಮಗೂ ಹಕ್ಕಿದೆ. ಇಷ್ಟಕ್ಕೂ ನಾನೇನೂ ಹಾಳುಗೆಡವಲು ಕೇಳುತ್ತಿಲ್ಲವಲ್ಲ ? ಹೇಳಿದೆನಲ್ಲ, ನನಗೂ ಸ್ವಂತವಾಗಿ ಬದುಕಬೇಕೆಂಬ ಆಸೆ ಇದೆಯಂತ.... ಅದೂ ನಿನಗಿಷ್ಟವಿಲ್ಲದಿದ್ದರೆ ಬೇಡ ಬಿಡು....' – ಇತ್ಯಾದಿ. ಕಡೆಗೆ ಈ ವಿಚಾರ ಮೊದಲು ಅಮ್ಮನ ಬಳಿ, ಆಮೇಲೆ ಕೃಷ್ಣಸ್ವಾಮಿಯ ಬಳಿ ಪ್ರಸ್ತಾಪಿಸಲು ಭಾಗೀರಥಿ ಒಪ್ಪಿದಳು. ಹಾಗೆ ಒಂದೆರಡುಬಾರಿ ಅಪರೋಕ್ಷವಾಗಿ ಪ್ರಯತ್ನಪಟ್ಟರೂ ಮನಸ್ಸು ಹಿಂಜರಿಯತೊಡಗಿತು. ಆದರೆ ನಾರಾಯಣನ ಬಲವಂತ ಹೆಚ್ಚತೊಡಗಿದಂತೆ, ಅವಳ ಧೈರ್ಯವನ್ನೇ ಅವನು ಪ್ರಶ್ನಿಸತೊಡಗಿದಂತೆ ಆಕೆಗೂ ಮೊಂಡುಧೈರ್ಯ ಬಂದು ಒಂದು ದಿನ ರಾತ್ರಿ ಊಟಕ್ಕೆ ಕುಳಿತಾಗ ವಿಷಯವನ್ನು ಎತ್ತಿಯೇ ಬಂದಳು.

ಕೇಶವ ಮಳಗಿ ನವ ಪೀಳಿಗೆಯ ಬಹು ಮುಖ್ಯ ಕಥೆಗಾರರಲ್ಲಿ ಒಬ್ಬರು.
ಇವರ ಮೊದಲ ಕಥಾಸಂಕಲನ 'ಕಡಲ ತೆರೆಗೆ ದಂಡೆ' ಈಚಿನ
ವರ್ಷಗಳಲ್ಲಿ ಬಂದ ಅಮೂಲ್ಯ ಕೃತಿಗಳಲ್ಲಿ ಒಂದು.
ಭಾವತೀವ್ರತೆ, ಗಾಢ ಅಂತರ್ಮುಖತೆ, ಜೀವನೋನ್ಮುಖತೆ
ಇವರ ಕಥೆಗಳ ಛಂದಸ್ಸನ್ನು ನಿರ್ಮಿಸಿವೆ.
ಅಂದರೆ ಕನ್ನಡದ ಮೂರು ಮುಖ್ಯ ಕಥಾಪರಂಪರೆಗಳ ಪ್ರಧಾನಗುಣ
ಇವರ ಕಲೆಗಾರಿಕೆಯ ಹಿಂದಿದೆ.
ಈ ಶಕ್ತಿಶಾಲಿ ಕಥೆಗಾರನ ಮೊದಲ ಕಾದಂಬರಿ ಕುಂಕುಮಭೂಮಿಯ
ಪ್ರಧಾನಗುಣ ನಿರಾಡಂಬರತೆ. ಭೂಮಿಯ ಜತೆ ಮೂರು
ತಲೆಮಾರುಗಳ ಒಡನಾಟ, ಸಂಘರ್ಷ ಮತ್ತು ಈ ಹಿನ್ನೆಲೆಯಲ್ಲಿ
ಬದಲಾಗುತ್ತಾ ಹೋಗುವ ಮಾನವ ಸಂಬಂಧಗಳ ವಿಶ್ಲೇಷಣೆ -
ಕುಂಕುಮಭೂಮಿ.

---

**ಕಲ್ಯಾಣಿ ಪ್ರಕಾಶನ,** ಬೆಂಗಳೂರು

